# ಪೂರ್ಣಚಂದ್ರ



ಅರ್ಚಿಕ ವೆಂಕಟೇಶ



ಪ್ರಕಾಶಕರು :

**ಸತ್ಯಶೋಧನ ಪುಸ್ತಕ ಭಾಂಡಾರ**

ಕೋಟೆ :: ಬೆಂಗಳೂರು ನಗರ

# ಹಾರೈಕೆ

ಪ್ರಿಯ ವೆಂಕಟೇಶ್,

ಕಾವ್ಯ ಕಟ್ಟುವ ರೂಢಿಯನ್ನು ನಾನು ತಾತ್ಕಾಲಿಕವಾಗಿ ಹಿಂದೆ ಬಿಟ್ಟಿದ್ದರೂ ಇತರರು ಕಟ್ಟಿತಂದ ಕಾವ್ಯವನ್ನು ಓದಿನೋಡುವ ರೂಢಿಯನ್ನು ಇನ್ನೂ ಇಟ್ಟುಕೊಂಡಿದ್ದೇನೆ. ಅದರಿಂದಾಗಿ ನಮ್ಮ ಹೊಸಕನ್ನಡದಲ್ಲಿ ಪತ್ರಿಕೆಗಳಲ್ಲೂ ಪುಸ್ತಕರೂಪವಾಗಿಯೂ ಪ್ರಕಟವಾಗುವ ಅನೇಕ ಕವಿತೆಗಳನ್ನು ನಾನೂ ಓದುತ್ತೇನೆ. ಆದರೆ ಹೇಳಬೇಕಾದ ವಿಷಯ ಸ್ವಲ್ಪವಾಗಿರಲಿ ಹೆಚ್ಚಾಗಿರಲಿ ಅದನ್ನು ಬಳಸಿಲ್ಲದೆ ನೇರವಾಗಿ, ಮುಚ್ಚಿ ಹೇಳಿದರೂ ಸ್ಪಷ್ಟವಾಗಿ, ಉಪಯೋಗಿಸುವ ಭಾಷೆಯ ಸ್ವರಮೇಳಕ್ಕೆ ಕಿವಿ ಬೆಳಸಿ, ಪದ್ಯರೂಪವನ್ನು ವಿರೂಪಮಾಡದೆ, ಪ್ರಾಸವನ್ನು ಬಿಟ್ಟರೂ ಬಿಟ್ಟದ್ದು ಎದ್ದು ತೋರದ ಹಾಗೆ, — ಇರುವ ಸ್ವಲ್ಪ ಪ್ರಮಾಣದಲ್ಲಿಯೇ ಸಕಲಾಯತ್ತ ಸಿದ್ಧಿಯನ್ನೂ ಮಿಂಚಿಸಬಲ್ಲ ಪದ್ಯಬಂಧಗಳನ್ನು ನಿರ್ಮಿಸಿರುವ ಹೊಸ ಕವಿಗಳು ಈ ಪ್ರಕೃತದ ದಶಕದಲ್ಲಿ ಕಂಡುಬಂದಿರುವುದು ಕೊಂಚವೇ. ಇಂಥ ಕೊಂಚವನ್ನಾದರೂ ಬೆಳೆಸಿ ಬಂದಿರುವ ಈ ದಶಕದ ಕವಿಚಿರಂಜೀವಿಗಳಲ್ಲಿ ನೀವೂ ಒಬ್ಬರೆಂದು ನನ್ನ ನಿರ್ವಂಚನೆಯಾದ ವಿಶ್ವಾಸ.

ಪ್ರಕೃತದಲ್ಲಿ ನೀವು ಕಳಿಸಿರುವ 'ಪೂರ್ಣಚಂದ್ರ' ಸಂಗ್ರಹದಲ್ಲಿನ ಕೆಲವು ಕವನಗಳನ್ನು ಈ ಮೊದಲೇ ಅಲ್ಲಲ್ಲೆ ಓದಿದ್ದೇನೆ. ಈ ಸಂಗ್ರಹದಲ್ಲಿಯೂ ಮತ್ತೊಮ್ಮೆ ಓದಿದ್ದೇನೆ. ಇವು ಎರಡನೆಯ ಸಲ ಕೂಡ ಅನಾಯಾಸದಿಂದ ಓದಿಸಿಕೊಂಡು ಸಂತೋಷಕೊಟ್ಟವೆ. ನಿಮ್ಮ ಕವನಗಳಲ್ಲಿ ನನಗೆ ಮೊತ್ತಮೊದಲು ಪ್ರಿಯವಾಗುವ ಗುಣವೆಂದರೆ — ಅದು ಎಲ್ಲ ಕವನಗಳಿಗೂ ದೇಹದಂತೆ ಇರಬೇಕಾದ ಗುಣ : ಓದುಗರ ಕಿವಿಯನ್ನು ಹಿಡಿಯಬಲ್ಲ ಗುಣ. ನಿಮ್ಮ ಪದಗಳ ಜೋಡಣೆಯನ್ನು ನೋಡಿದರೆ, ನಮ್ಮ ಹಿಂದಿನ ಷಟ್ಪದಿ ಹಾಗೂ ಸಾಂಗತ್ಯಗಳ 'ಸೊಗಡು' ಜ್ಞಾಪಕವಾಗುತ್ತದೆ.

ಮೊದಲ ಆಕರ್ಷಣೆಗೆ ಈ 'ವಾಸನೆ'ಯ ಸಹಾಯ ಯಾವ ರೀತಿಯಿಂದಲೂ ಅಲ್ಪಕವಾದುದಲ್ಲ. ಈ ಒಪ್ಪುವ ವೈಯೊಳಗೆ ತೋರಿಬರುವ ಮನಸ್ಸಾದರೂ ತಾನು ಕಂಡ ಚೆಲುವನ್ನು, ತಾನು ಅನುಭವಿಸಿದ ಸಂಕಟವನ್ನು, ತಾನು ಹಂಬಲಿಸಿದ ಕನಸುಗಳನ್ನು, ತಾನು ತನಗೇ ಶೋಧಿಸಿಕೊಂಡ ಧೀರಜೀವನವನ್ನು ಅಸಂದಿಗ್ಧವಾಗಿ ಸಾರಿ, ಎದುರು ಮನಸ್ಸನ್ನು ಮುಟ್ಟುವಂತೆ ನಡೆಯುವ ಸಾಮರ್ಥ್ಯವನ್ನು ಪಡೆದಿದೆ. ಈ ಮನಸ್ಸಿನ ನಡಿಗೆಗೆ ಅನುಗುಣವಾದ ಛಂದಸ್ಸೂ, ಒಂದಲ್ಲ ಒಂದು ರೀತಿಯಿಂದ ಪ್ರಾಸವನ್ನು ಪಾಲಿಸಿಕೊಂಡು ಬಂದಿರುವ ಜಾಗೃತಿಯೂ ಪದ್ಯಗಳಿಗೆ ನಿಜವಾಗಿಯೂ ಕಳೆಕೊಟ್ಟಿದೆ.

ಆದರೂ ಸಂಗ್ರಹವನ್ನು ಸಹೃದಯನಾಗಿ ಓದಿ, ಒಂದು ಮಾತು ಹೇಳಬೇಕೆನ್ನಿಸುತ್ತದೆ. ಎಂದರೆ, ಇದು ದೋಷವೆಂದಲ್ಲ, ಗುಣವನ್ನು ಇನ್ನೂ ಬೆಳೆಯಗೊಡಬಹುದಾಗಿತ್ತು ಎಂದು ಮಾತ್ರ. ಅದೇನೆಂದರೆ— ಕಂಡ ದರ್ಶನಗಳಿಂದ ಆದ ಅನುಭವಕ್ಕಿಂತ ದರ್ಶನಗಳನ್ನು ಕಾಣಬೇಕೆಂಬ ಹಂಬಲವೇ ಈ ಸಂಗ್ರಹದಲ್ಲಿ ಸ್ವಲ್ಪ ಹೆಚ್ಚಾದಂತೆ ಎನ್ನಿಸುತ್ತದೆ. ಇರುವ ಕೆಲವಾರು ಅನುಭವದ ಚಿತ್ರಗಳಲ್ಲಿ ಕೂಡ ಅನುಭವಗಳನ್ನು ಕೇವಲ ವೈಯಕ್ತಿಕವಾಗಿ ನಿಲ್ಲಿಸಿಕೊಂಡಿದ್ದೀರಿ. ಅದೇ ಅನುಭವ ಇನ್ನೂ ವಿಸ್ತಾರವಾಗಿ ನಿಮ್ಮಿಂದ ಹೊರಗಿನ ಲೋಕವನ್ನೂ ಮುಟ್ಟಿಬಂದಿದ್ದರೆ, ಸಂಗ್ರಹದಲ್ಲಿ ಈಗ ಕಾಣುವ ಮಿತಿ ಮರೆಯಾಗಿ, ಕವನದ ವ್ಯಾಪ್ತಿ ಅತಿಶಯವಾಗುತ್ತಿತ್ತು.

ಆದರೆ ತಾನೆ ಏನು? ನೀವೂ ಇನ್ನೂ ವಯಸ್ಸಿನಲ್ಲಿ ಚಿಕ್ಕವರಷ್ಟೆ. ಇದು ಈಗ ತಾನೆ ನಿಮ್ಮ ಮೊದಲ ಕವನಸಂಗ್ರಹ ಅಲ್ಲವೆ. ಮುಂದಿನ ಸಂಗ್ರಹಗಳನ್ನು ಕುರಿತು ನೀವು ಮುಖತಃ ಮಾತನಾಡಿದ್ದು ನೋಡಿದರೆ, ಅವುಗಳಲ್ಲಿ ಇದಕ್ಕಿಂತ ಹೆಚ್ಚಿನ 'ತುಂಬು' ಇರುವುದೆಂಬ ಭರವಸೆ ಇದೆ. ಪ್ರಗತಿಯಲ್ಲಿ ಶ್ರದ್ಧೆ ಆಸಕ್ತಿಗಳನ್ನು ಹೊಂದಿರುವ ನಿಮಗೆ ಸಂತತವಾದ ಅಭ್ಯಾಸದಿಂದ ಪ್ರವೃದ್ಧಿಯೂ ಸಿದ್ಧಿಸಲಿ, ನಿಮ್ಮ ಗತಿ ಹಾಗೂ ನಿಮ್ಮ ವೃದ್ಧಿ ಸರ್ವತೋಮುಖವಾಗಲಿ ಎಂದು ಮನಸಾರೆ ಹಾರೈಸುತ್ತೇನೆ.

ನಿಮ್ಮವ,

**ಜಿ. ಪಿ. ರಾಜರತ್ನಂ**

# ಮೊದಲಿಗೆ

ನನ್ನ ಮೊದಲ ಕವನ ಸಂಗ್ರಹ—'ಪೂರ್ಣಚಂದ್ರ' ಇಂದು ಬೆಳಕು ಕಾಣುತ್ತಿದೆ. ಅತ್ಯಂತ ಸಂತೋಷದಿಂದ ಇದನ್ನು ನನ್ನ ನಾಡ ನುಡಿ ಭಕ್ತರೆದುರು ಇಡುತ್ತಿದ್ದೇನೆ.

ನಾನು ಕಳೆದ ಹತ್ತು ವರ್ಷದಲ್ಲಿ ಬರೆದ ಅನೇಕ ಪದ್ಯಗಳಲ್ಲಿ ಕೆಲವನ್ನು ಮಾತ್ರ ಈ ಸಂಗ್ರಹಕ್ಕೆ ಆಯ್ದುಕೊಂಡೆ. ಇಲ್ಲಿನ ಆಯ್ಕೆ ನನ್ನ ದೃಷ್ಟಿಕೋನವನ್ನು ಹೊಂದಿಕೊಂಡಿದೆ. ಮೊದಲಿಂದ ಕೊನೆಯ ವರೆಗೂ ಒಂದು ಸೂತ್ರ ಅವ್ಯಕ್ತವಾಗಿ ಮೈದಾಳಿದೆ. ಅದನ್ನು ರಸಿಕರಾದ ಸಹೃದಯರು ಕಂಡೇಕಾಣುವರೆಂಬ ಭರವಸೆ ನನಗಿದೆ.

ಪ್ರತಿಯೊಂದು ಕವಿತೆಗೂ ಅದು ನನ್ನ ಮನದಲ್ಲಿ ಮೈಗೊಂಡ ಬಗೆಯನ್ನೂ, ಅದಕ್ಕೆ ಸಂಬಂಧಪಟ್ಟ ಕತೆಯನ್ನೂ ಬರೆಯಬೇಕೆಂದು ಬಯಸಿದ್ದೆ. ಆದರೆ, ಒಂದು ದೃಷ್ಟಿಯಲ್ಲಿ ಹಾಗೆ ಮಾಡುವುದು ಸರಿಯಲ್ಲವೆಂದು ತೋರಿತು. ಆ ವಿಚಾರವನ್ನು ಅಲ್ಲಿಗೇ ಬಿಟ್ಟುಬಿಟ್ಟೆ. ಕವನದ ಹಿನ್ನಲೆಯನ್ನು ಕಾವ್ಯಾಭ್ಯಾಸಿಗಳಾದ ಓದುಗರೇ ಕಲ್ಪಿಸಿಕೊಳ್ಳುವುದು ಸೂಕ್ತವೆಂದೂ ಭರವಸೆ ಇಟ್ಟುಕೊಂಡಿದ್ದೇನೆ.

'ಗೌರಮ್ಮ' ಮತ್ತು 'ಬಡತನ ಸಿರಿತನ' ಪದ್ಯಗಳ ಬಗ್ಗೆ ಒಂದೆರಡು ಮಾತನ್ನಾದರೂ ಹೇಳದಿದ್ದರೆ ಅವುಗಳ ಸರಿಯಾದ ಮತ್ತು ಸಮಗ್ರ ಭಾವ ಗ್ರಹಣಕ್ಕೆ ಅಡ್ಡಿಯಾದೀತು.

'ಗೌರಮ್ಮ' ವ್ಯಕ್ತಿಯನ್ನುದ್ದೇಶಿಸಿ ಬರೆದ ಕವನವಲ್ಲ. 'ಪೇಪರ್ ವೇಟ್'ಗಾಗಿ ಇಟ್ಟಿದ್ದ ಶಿಲಾಪ್ರತಿಮೆಯನ್ನು ನೋಡಿ ಬರೆದದ್ದು. 'ಬಡತನ ಸಿರಿತನ' ನಾನು ಫ್ಯಾಕ್ಟರಿಯ ಕೂಲಿಯಾಗಿ ಕೆಲಸಮಾಡಿ, ಆ ಜೀವನದಿಂದ ಮುಕ್ತಿಹೊಂದಿ ಹೊರಗೆ ಬಂದ ಕೆಲವು ದಿನಗಳಲ್ಲಿ ಬರೆದ ಕವಿತೆ. ಬಾಳ ಹೋರಾಟದಲ್ಲಿ ಕಂಡ ಅಸಹ್ಯ ಜೀವನದಿಂದ ನೊಂದ

ಜೀವಕ್ಕೆ ಕೆಲಕಾಲವಾದರೂ ಆನಂದದ ರಸವಾಹಿನಿ ಸೋಕಲಿ ಎಂಬ ಆಶಾವಾದ ಅಲ್ಲಿ ವ್ಯೈವೆತ್ತಿದೆ.

ಇನ್ನು ಈ ಸಂಗ್ರಹದಲ್ಲಿ ಅನೇಕ ಭಾವಗೀತೆಗಳಿವೆ. ಅವುಗಳನ್ನು ಸುಂದರ ಕಂಠವುಳ್ಳವರು ಸೊಗಸಾಗಿ ಹೇಳಬಹುದು — ಹಾಡಬಹುದು. ಅವುಗಳ ಬಗ್ಗೆ ನಾನು ಏನನ್ನೂ ಹೇಳಲಿಚ್ಛಿಸುವುದಿಲ್ಲ.

ನನ್ನ ಈ ಕವನ ಸಂಗ್ರಹಕ್ಕೆ ಪ್ರೇಮಪೂರ್ವಕವಾದ ಹಾರೈಕೆಯನ್ನಿತ್ತ ಕನ್ನಡದ ಹಿರಿಯ ಕವಿಗಳಾದ ಶ್ರೀ ಜಿ. ಪಿ. ರಾಜರತ್ನಂ ಅವರಿಗೆ ನನ್ನ ಕೃತಜ್ಞತೆಯು ವಂದನೆಗಳು ಮುಡಿಪಾಗಿವೆ. 'ಪೂರ್ಣ ಚಂದ್ರ' ಬೆಳಕು ಕಾಣುವಂತೆ ಮಾಡಿದ ಸರ್ವ ಶ್ರೇಯಸ್ಸೂ ಸತ್ಯಶೋಧನ ಪುಸ್ತಕ ಭಾಂಡಾರದ ಒಡೆಯರಾದ ಮಾನ್ಯ ನಿಟ್ಟೂರು ಶ್ರೀನಿವಾಸ ರಾಯರದು. ಮುದ್ರಣಕ್ಕೆ ಗಂಡಾಂತರ ಒದಗಿರುವ ಈ ಘೋರ ಕಾಲದಲ್ಲಿ ನನ್ನ ಈ ಪುಸ್ತಕವನ್ನು ಅತ್ಯಂತ ಆತ್ಮೀಯತೆಯಿಂದ, ಭ್ರಾತೃ ಪ್ರೇಮದಿಂದ ಸರ್ವಾಂಗ ಸುಂದರವಾಗಿ ಅಚ್ಚುಮಾಡಿದ ಕೀರ್ತಿ ಗೆಳೆಯ ವಿ. ರಾಮಕೃಷ್ಣ ಅವರಿಗೆ ಸಲ್ಲಬೇಕು. ಅವರ ನೆರವು ನನಗಿಲ್ಲದಿದ್ದರೆ ನನ್ನ ಆಶಾ ಸೌಧವೆಲ್ಲ ಹುಡಿಗೂಡುತ್ತಿತ್ತು. ಪ್ರಕಾಶಕ ಮತ್ತು ಮುದ್ರಕರೀರ್ವರಿಗೂ ನನ್ನ ಅನಂತ ವಂದನೆಗಳು.

ನನ್ನ ಕವನಗಳ ಬಗ್ಗೆ ಅಪೂರ್ವ ಆಸಕ್ತಿಯನ್ನೂ, ಆತ್ಮೀಯತೆಯನ್ನೂ ತೋರುತ್ತ ಬಂದ ನನ್ನ ನಾಡವರು 'ಪೂರ್ಣಚಂದ್ರ'ನನ್ನು ಅತ್ಯಂತ ಪ್ರೇಮಾದರಗಳಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಬೆಂಗಳೂರು ನಗರ
೧೫-೨-೧೯೪೭

**ಅರ್ಚಿಕ ವೆಂಕಟೇಶ**

# ಅ ರ್ಪ ಣೆ

ನಮೋ ಶರಣ
ತಮೋ ಹರಣ
  ಓಂಕಾರ ದರ್ಪಣ
" ಪ್ರೀತಿ ಪೂರ್ಣ-
ಚಂದ್ರ " ಕಿರಣ
  ನಿನ್ನ ಅಡಿಗೆ ಅರ್ಪಣ

# ಭಾಗ್ಯ ಪುರುಷ

ಪೂರ್ಣ ಪುಣ್ಯೋದಯದ ಪೂರ್ವ ದಿಕ್ತಟದಲ್ಲಿ
ಹೊನ್ನಿನುರಿ ಹೊಮ್ಮುತಿದೆ ಹೊಸತು ಹೊಸ್ತಿಲಹಾಂ
ಮುನ್ನಾಸೆ ಮುನ್ನೋಟದಮೃತವನು ಮನ ಮೀಂ
ಪೂರ್ಣತೆಯ ಪ್ರಾಣದುಸಿರನವರತ ಪರಿವಲ್ಲಿ
　　ಚಂದಿರನ ಸುಂದರನ ಬಂಧುರನ ಭಾಗ್ಯದಲಿ
　　ಮಂದ ಮಾರುತ ಮನದ ಲೀಲಾ ವಿನೋದದಲಿ
　　ಮುಂದೆ ಬಹ ಮುಕ್ಕೋಟಿ ಜನುಮ ಜಯ ಗಂಗೆಯಲಿ
　　ಮಿಂದು ಬಾಳುವ ದಿವ್ಯ ಭವ್ಯಾನು ಭೂತಿಯಲಿ
ತೇಲಿ ಮೇಲಾಟವನ್ನಾಡಿ ಮುದವನು ಬೇಡಿ ;
ಕಾಲ ರುದ್ರನ ಕಾಲಗೆಜ್ಜೆ ತಕಥೈಯೆಂದು
ಮೂಲೋಕ ಮನುಜನೊಲು ತನ್ನ ಮೈ ಮರೆತಂದು
ಗೇಲಿಗೈಯ್ಯುವ ದೇವಗಣಿಕೆಯರ ನೊಡಗೂಡಿ
　　ಸಾಗಿ ಬರುತಿಹನದೋ ಸೂರ್ಯ ತೇಜೋರಾಶಿ !
　　ಬಾಗರಾರೀ ಭಾಗ್ಯ ಪುರುಷ ಬರೆ ಕೈವೀಸಿ !

ಬೆಂಗಳೂರು : ೧೯೪೩.

# ಒಲಿದು ಬಾ ಚೆನ್ನ

೧

ಮನದ ಮುಗಿಲಿನ ತೆರೆಯ ಮುಸುಕಿನಲಿ ಮರೆಯಾಗಿ
ಜನದ ಮಾತಿನ ಶಿಲೆಯ ತಿಳಿನೀರ ಹನಿಯಾಗಿ
ಕನಸು ಕಾಣದ ಬಣ್ಣ ಬಣ್ಣಗಳ ತೆನೆಯಾಗಿ
    ತೂಗಿ ಬಾ, ತಾಗಿ ಬಾ, ಬೀಗಿ ಬಾ ಬಂಧು !

೨

ದಿವ್ಯ ತೇಜೋನಿಧಿಯ ಕೈ ಹಣತೆ ನೀನಾಗಿ
ಭವ್ಯ ಬಂಧುರ ಭಾಗ್ಯದರಮನೆಯ ಸಿರಿಯಾಗಿ
ಕಾವ್ಯ ಸರಸಿಯ ಚೆನ್ನ ಹೊನ್ನ ತಾವರೆಯಾಗಿ
    ಉರಿದುರಿದು, ಸರಿಸರಿದು ಬಿರಿಬಿರಿದು ಬಾರ್‍ಕೈ !

೩

ಮಂಗಲದ ಮಧುಗೀತ ನೆಲ್ಲಿರ್ಪೆ ? ಬನದಲ್ಲಿ
ಬಂಗಾರದರಮನೆಯ ನಿರ್ಮಿಸುವೆ ; ಜನದಲ್ಲಿ ?
ಸಿಂಗಾರದೈಸಿರಿಯ ಚೆಲ್ಲುವೆಯೊ ; ಮನದಲ್ಲಿ
    ನಲಿದು ಬಾ, ಉಲಿದು ಬಾ, ಒಲಿದು ಬಾ ಚೆನ್ನ !

ಬೆಂಗಳೂರು: ೧೯೪೨.

# ಕವಿ

ಅದ್ಭುತಂ ಓ ಕವಿಯೆ ನಿನ್ನ ಕಲ್ಪಕ ಶಕ್ತಿ
ಸುಂದರಂ ಬಂಧುರಂ ಮಂಗಲಂ ನಿನ್ನುಕ್ತಿ
ಜಗದಂತರಾಳಗಳ ಸೂತ್ರಧಾರನ ನಲಿಸಿ
ಕಣ್ಗೆ ಕಾಣದ ಭವ್ಯ ಚಿತ್ರಗಳ ನಳವಡಿಸಿ
ಮೆರುಗು ಮೆರುಗಿನ ಬಣ್ಣ ಬಣ್ಣಗಳ ಬಳಿ ಬಳಿದು
ನಿನ್ನ ಕಾಲಲಿ ಮೆಟ್ಟಿ ತರಬಲ್ಲೆ; ನೀಂ ಧೀರ
ಯಾರಿಗೂ ಕಾಣದುದು
ನಿನಗೆ ಕಾಣುವುದು
ಯಾರಿಗೂ ಕೇಳದುದು
ನಿನಗೆ ಕೇಳುವುದು !
ಮೃದು ಕಠಿಣ ಸಿಹಿ ಕಹಿಯು ರುಚಿ ನೀನೆ ನೀನಾಗಿ –
ರಸಿಕರನು ತಣಿಸುವೆಯೊ ಓ ! ಮಾನ್ಯ ಧನ್ಯ !

ಠಳಕವಾಡಿ: ೧೯೪೦.

# ವಿಶ್ವಾತ್ಮ

ನೇಸರು ಮೂಡಿತು ಮೂಡಲಲಿ
ತೇಜೋವರ್ಧೆಯೆದೆಯೊಳದಲಿ
ನಗೆ ಮಿನುಗಿತು ಹೊಸ ಮೊಗದಲ್ಲಿ
ಭಾವೋನ್ಮೀಲಿತ ಸಿಡಿಲಲ್ಲಿ !
ಕನಸಿನ ಕಣ್ಣಿನ ಬಣ್ಣದಲಿ
ಮನಸಿನ ಮಣ್ಣಿನ ಹಣ್ಣಿನಲಿ
ಕಾಣುವ ಕಾಣದ ರೂಪಿನಲಿ
ಬಾಣದ ಭೀಕರ ವೇಗದಲಿ
ಹಿಡಿಯಲು ನೆಗೆವುದು
ನೆಗೆಯಲು ಸಿಡಿವುದು
ಧರ್ಮದ ದೀಪ್ತಿಯು ನೆಳಲೇನು ?
ಕರ್ಮದ ಮರ್ಮಕೆ - ಮಳಲೇನು ?
ಜಾತಿಯು ಜೀವದ ಹೆಣವೇನು ?
ಮಾತಿನ ಮಾಲೆಯು ಜೊತೆಯೇನು ?
ಅರಿತವರಾರೈ ಯುಗ ಧರ್ಮ ?
ಅರಿತವನೊಬ್ಬನೆ ವಿಶ್ವಾತ್ಮ !

ಬೆಂಗಳೂರು: ೧೯೪೩.

# ಎನಿತು ಸುಂದರ

೧

ಕಣ್ಣಿನಲ್ಲಿ ಕಣ್ಣು ಬೆರೆಯೆ
ಹಣ್ಣಿನಲ್ಲಿ ಜೇನು ಸುರಿಯೆ
ಬಣ್ಣದಲ್ಲಿ ಭಾವ ಬಿರಿಯ -
ಲೆನಿತು ಸುಂದರ ?
ತುಂಬಿ ಬಂದ ಹೃದಯ ನುಡಿಯ -
ಲೆನಿತು ಬಂಧುರ ?

೨

ಅರಳಿದಲರು ನಗೆಸೂಸಿರೆ
ತಿರೆಯ ಸೊಗಸು ತೂಗುತಲಿರೆ
ಕರುಳದನಿಯು ಕರೆಯುತಲಿರ -
ಲೆನಿತು ಸುಂದರ ?
ಜೀವ ಹಾವ ಭಾವ ಮಾಡ -
ಲೆನಿತು ಬಂಧುರ ?

೩

ನಗೆ ಬಾಳಿನ ದಿವ್ಯ ದೀಪ
ಸೊಗಕೆ ಪ್ರೀತಿ – ಸಲಿಲ ಕೂಪ
ಬಗೆಗೆ ಭಾಗ್ಯ ಪುರುಷ ರೂಪ
ವೆನಿತು ಸುಂದರ ?
ಅಂತರಂಗದಳತೆ ತಿಳಿಯ –
ಲೆನಿತು ಬಂಧುರ ?

೪

ಒಲಿದ ಹೆಣ್ಣು ತಾನೆ ಬರಲು
ಲಲಿತ ಕವನ ಕೊನರೊಡೆಯಲು
ನೆಲಸಲು ಸಿರಿ ಹಾತೊರೆಯಲು
ಎನಿತು ಸುಂದರ ?
ಹಕ್ಕಿಯಂತೆ ಹಾಡೆ ಕವಿಯು
ಎನಿತು ಬಂಧುರ ?

೫

ಸಂಗೀತದ ಭೃಂಗವೊರೆಯೆ
ಬಂಗಾರದ ಬಳ್ಳಿ ತೊನೆಯೆ
ಸಿಂಗಾರದ ಶಿಲ್ಪಿನಲಿಯ
ಲೆನಿತು ಸುಂದರ ?
ಬಿಸವನಮದುರ್ದುರ್ಗೈವ ಲೀಲೆ
ಎನಿತು ಬಂಧುರ ?

೬

ಚೆಲುವು ಪೂರ್ಣಚಂದ್ರನಂತೆ
ಗೆಲುವು ಮಹಾ ಯೋಗಿಯಂತೆ
ಒಲವು ವಂದ್ಯೆ ಗಂಗೆಯಂತೆ
ಇರಲು ಸುಂದರ !
ಆಸೆ ಸೂಸಿ ಹರಿಯುತಿರಲು
ಎನಿತು ಬಂಧುರ ?

೭

ಜ್ಞಾನ ಪ್ರಭಾ ದೀಪ್ತಿ ಬೆಳಗೆ
ಮೌನ ಮಂತ್ರ ಮನದಿ ತೊಳಗೆ
ಭಾನು ಕೀರ್ತಿಯಾಗಿ ಮಿನುಗ-
ಲೆನಿತು ಸುಂದರ ?
ತಿಳಿವಿನ ಜಲ ಜೀವ ತಳೆಯ
ಲೆನಿತು ಬಂಧುರ ?

*    *    *

ಬಂಧುರತೆಯೆ ಸುಮಧುರ
ಸುಮಧುರತೆಯೆ ಬಂಧುರ !

ಬೆಂಗಳೂರು: ೧೯೪೩.

# ಯುಗಾದಿ

ಕಲ್ಪ ಕಲ್ಪಾಂತರದ ಕಲ್ಪನಾ ಸರಸಿಯಲಿ
ಸುಂದರ ಸುನೀಲಾಭ್ರ ಶುಭ್ರಮಾರ್ಗದಿ ತೇಲಿ
ಎಂದೆಂದಿಗೂ ಚೆಂದ ಬಂಧುರ ಸುಹಾಸದಲಿ
ಕಲ್ಪವೃಕ್ಷದ ಚಿಗುರ ಚೆಂಬಣ್ಣದೊಗರಿನಲಿ
      ನಲಿದು ನರ್ತಿಸಿ ನಕ್ಕು ನವಸುವರ್ಣವ ಹೋಲಿ
      ನಲುಮೆಯೊಲುಮೆಯ ಜಲದ ಲೀಲಾತರಂಗದಲಿ
      ಚೆಲುವು ಮಲಗಿದ ನವ್ಯ ಕೋಮಲ ಸುಶಯ್ಯೆಯಲಿ
      ಒಲಿದೊಲಿದು ತಲೆದೂಗಿ ಸೋಗಿನುಯ್ಯಾಲೆಯಲಿ
ಧೃವ ದಂಚುಗಳ ಮೀರಿ, ಕಂಡು ಕಾಣದೆ ಹಾರಿ
ಹದಿನಾಲ್ಕು ಲೋಕಗಳ ಹದನಾವುದೆಂದರಿತು
ಮುದದಿ ಮುನ್ನಾಸೆಗಳ ಮುನ್ನೂಕಿ ಮನಸೋತು
ಸವೆ ಸವೆದು ಸಣ್ಣಾಗಿ ಮಣ್ಣಿನಲಿ ಕೈಯೂರಿ
      ಬಗೆದು ಬಂದಿತೊ ಭಾಗ್ಯನಿಧಿ ಮರಳಿ ಮಾಯದಲಿ
      ಜಗದಾದಿ ಯುಗದಾದಿ ಈ "ಯುಗಾದಿ"ಯ ಮಾಲೆ

ಬೆಂಗಳೂರು: ೧೯೪೩.

# ಯಾಂವ ನನ್ನ ಕೇಳಾಂವ?

ಯಾಂವ ನನ್ನ ಕೇಳಾಂವ ?
ಯಾಂವ ಯಾಂವ ಯಾಂವ ಯಾಂವ
ಯಾಂವ ನನ್ನ ಕೇಳಾಂವ ? ||ಪಲ್ಲ||

ಮನಸಿಗೆ ಬಂದರ ಬರಿಯಾಂವ
ಮನಸಿಗೆ ಬಂದರ ಹಾಡಾಂವ –ನನ
ಮನಸಿಗೆ ಬಂದರ ಕುಣಿಯಾಂವ
ಯಾಂವ ನನ್ನ ಕೇಳಾಂವ ? ||ಅ.ಪ||

ಗಾಳಿ ಸುಂಯ್ ಸುಂಯ್ ಅನ್ನಿತ್ತಿರವಲ್ದು
ಬೆಳಕು ತನ್ನೈಕ್ಯ ಚಾಚಿರವಲ್ದು
ಹಾಳು ಕತ್ತಲಿ ಇನ್ನೂ ಮಬ್ಬಿನಾಗ
ತೂಗಾಡ್ತಿದ್ದರ ತೂಗಾಡ್ತಿರಲಿ
ಯಾಂವ ನನ್ನ ಕೇಳಾಂವ ? ||೧||

ತೊಟ್ಟಿಲ ಕೂಸು ಆಡತಿರಲಿ
ತಾಯಿ ಜೋಗುಳ ಹಾಡತಿರಲಿ
ಹಕ್ಕಿದನಿಗೆ ದನಿಗೂಡಿಸಿದರು
ನಾಯಾಕ ನನ್ಹಾಡ ಹಾಡಲಿ ?
ಯಾಂವ ನನ್ನ ಕೇಳಾಂವ ! ||೨||

ತುಂಬಿ ಹೂವಿಗೆ ಮುತ್ತಿಡುತಿರಲಿ
ಸವಿದುಟಿ ಜೇನ ಕುಡಿಯುತ್ತಿರಲಿ
ಹುಂಬನ್ಹಂಗ ಮೈಯ್ಯಮರೆತು
ಗುಂಯ್ ಗುಂಯ್ ಗುಂಯ್ ಗುಂಯ್ ಅನ್ನುತ್ತಿರಲಿ
ಯಾಂವ ನನ್ನ ಕೇಳಾಂವ? ||೩||

ಹೆಣ್ಣು ಗಂಡು ಕೂಡಿಕೊಂಡು
ಸಣ್ಣ ಗೂಡ ಕಟ್ಟಿಕೊಂಡು
ತಮ್ಮ ಬಾಳು ಶಾಶ್ವತವೆಂದು
ಹಾಡತಿದ್ದರ ಹಾಡತಿರಲಿ
ಯಾಂವ ನನ್ನ ಕೇಳಾಂವ ? ||೪||

ಬರುವುದು ಬರಲಿ ಬಿಡುವುದು ಬಿಡಲಿ
ನ್ಯಾನ್ಯಾಕ್ಯೋಚನೆ ಮಾಡಲಿ ?
ಪರಮನ ಕರುಣೆಯು ಕರಗತವಾಗುತ
ಬಾಳುನಂದನವಾಗಲಿ
ಆಗ ನಾನು ಹಾಡಾಂವ
ಆಗ ನಾನು ಬಾರಿಯಾಂವ
ಆಗ ನಾನು ಕುಣಿಯಾಂವ ||೫||

ಯಾಂವ ನನ್ನ ಕೇಳಾಂವ ?
ಯಾಂವ ಯಾಂವ ಯಾಂವ ಯಾಂವ
ಯಾಂವ ನನ್ನ ಕೇಳಾಂವ ? ||ಪಲ್ಲ||

ಬೆಳಗಾವಿ : ೧೯೪೦.

# ಓ ! ವಾಣಿ

ಓ ! ವಾಣಿ ! ಸರಸಕವಿತಾಶ್ರೇಣಿ, ಅಜನ ಪ-
ಟ್ಟದ ರಾಣಿ, ರಸಿಕ ಜನ ಹೃದ್ವಲ್ಲಕಿಯ ತಂತ್ರಿ-
ಯಂ ಮಿಡಿಸಿ ಮಂದಹಾಸಂಗೈವ ದಿವ್ಯ ವೀ-
ಣಾಪಾಣಿ, ಫಣಿವೇಣಿ, ಶುಭವಾಣಿ, ನಮಿಸುವೆಂ
ಭಯ ಭಕ್ತಿಯಿಂದೆಲೌ, ತಾಯೆ, ಶಾರದೆಯೆ, ನೀ-
ನೆನ್ನ ನಾಲಗೆದುದಿಯೊಳಾವಗಂ ಲೀಲೆಯಿಂ
ನರ್ತನಂಗೈದು ಹರಸೌ ; ಮಹಾಕಾವ್ಯ ಹೃ-
ತ್ಸರಸಿಯಲ್ಲರಳಿ ಘಮಘಮಿಪ ಕಮಲಿನಿಯ ತುಟಿ
ಜೇನಿನಿನಿಸಿಹಸಿಯ ನೀಂಟುವ ತುಂಬಿಯಪ್ಪಂತೆ-
ಕೃಪೆಗೈಯ್ಯೆ, ಹೇ ದೇವಿ, ಸಂತಸದ ಸರಿಯ ಸುರಿಸಿ !

ಕವಿಯ ಕೀರ್ತಿಯ ಕಂಡು ಸುರಪತಿಯು ಮರುಳಾದ
ದೇವಾಧಿ ದೇವತೆಗಳೆಲ್ಲರುಂ ಮೂಕ ವಿ-
ಸ್ಮಿತರಪ್ಪರೌ, ಮಾಯೆ, ನಿನ್ನ ನುಡಿಗೆನಿತದ್ಭು-
ತಂ ಶಕ್ತಿ ! ದಯೆಗೈಯ್ಯೆ, ಓ ! ದೇವಕವಿ ವಂದ್ಯೆಯೇ !

ಬೆಂಗಳೂರು : ೧೯೪೨.

# ಬಾಳ ಪಲ್ಲವಿ

೧

ಕಂಡ ವಸ್ತುವನುಳಿದು ಕಾಣದುದ ಬಯಸುವರೆ ?
ಕೆಂಡವನು ಕರ್ಪೂರ ಬಯಸಿದಂತೆ !
ಭಂಡರಿಗೆ ಬಲು ಭಾಗ್ಯ ಬೇಡೆನಲು ಬರುವುದುರೆ
ಹಿಂಡನಗಲಿದ ಜಿಂಕೆ ಬೆದರುವಂತೆ !

೨

ಇಂದಿನೀ ಬಾಳಿಲ್ಲ ನರಕವಾದರು ಸರಿಯೆ,
ಮನುಜನಂತೆಯೆ ಬಾಳು ತಾಳ್ಮೆಯಿಂದ
ಮಂದಿಯಾಡುವ ಮಾತು ಹೀನವಿರಲೆದೆಬಿರಿಯೆ
ನಿನಗು ದಿನವುಂಟೆಂಬ ಧೈರ್ಯದಿಂದ

೩

ನಿನ್ನ ನಿರ್ಮಲ ಹೃದಯ ಜ್ಯೋತಿಯನು ಬೆಳಗಿಸುತೆ
ನೈರ್ಮಲ್ಯದಿಂ ಬದುಕಿದೆಂಬುದರಿತು !
ನಿನ್ನ ನೀತಿಯೆ ನಿನಗೆ ಬಾಳ ಕೈ ಕಿರು ಹಣತೆ -
ಧರ್ಮವನು ದೂಡದಿರು ವೈಯ್ಯಮರೆತು

೪

ದುರ್ಜನರ ಗುರುತಿಸಲು ಕರಮುಗಿದು ಶಿರಬಾಗು
ಸಜ್ಜನರು ಸಜ್ಜನರೆ ಹಾಲು ಹಾಲೇ
ವರ್ಜವಾಗಿರಲಾಸೆ ಸಂತಸದಿ ತಲೆದೂಗು
ಕಜ್ಜ ಕೈಲಾಸದಲಿ ಜಯದ ಮಾಲೆ

*   *   *

ಇದು ಬಾಳ ಪಲ್ಲವಿಯು
ಇದು ಯಶೋ ದುಂದುಭಿಯು

ಬೆಂಗಳೂರು : ೧೯೪೩.

# ಕಾವ್ಯ ತಂತ್ರ

೧

ಬೆಣ್ಣೆಯಿಲ್ಲದೆ ತುಪ್ಪವನು ಕಾಯ್ಸಿ ತಿಂದುಂಡು
ತೇಗುವೆನು ಎಂದೆಂಬ ಮೂರ್ಖನಂತೆ !
ಸ್ಫೂರ್ತಿಯಿಲ್ಲದೆ ಕವನ ಹೃದಯದಿಂದಲಿ ಬಂದು
ಮನವ ತೂಗುವುದೆಂಬೆ ಹುಚ್ಚನಂತೆ !

೨

ಕಾವ್ಯ ಕನ್ನಿಕೆ ಮಹಾ ಸುಂದರಿಯು ನಿನಗೆಂತು
ಒಲಿಯುವಳೊ ತಿಳಿಗೇಡಿ, ಮರುಗಬೇಡ;
ಭವ್ಯಭವನವಬಯಸಿ, ಕಾಸು ಕಾಣದೆ ತಿರುಗಿ
ಬಳಲಿ ಬೀಳುವಿ ಏಕೆ ? ಚಿಂತೆದೂಡ !

೩

ಚೆಲುವುಗೆಲುವನು ಕಂಡು, ಐಸಿರಿಯ ಮನದಂದು,
ಒಲಿದು ಬರುವಾ ಕಾವ್ಯ ಕನ್ಯೆ ಬೇಡ;
ನಲವಿನಲಿ ಹೃದಯ ನೈರ್ಮಲ್ಯವನ್ನರಿಧುಲಿದು
ಕೆಲಸಾರೆ ಸ್ವಾಗತವ ಗೈವೆ ನೋಡ !

* * *

ಮನಮೆಚ್ಚಿ ಮೈಗೂಡೆ ಮಾತು ಮಂತ್ರ
ಕನಸು ನನಸಾಗುವುದೆ ಕಾವ್ಯ ತಂತ್ರ

ಬೆಂಗಳೂರು : ೧೯೪೪.

# ಗಾರ್ಕಿ

ವ್ಯಕ್ತಿಯಲ್ಲವು ಗಾರ್ಕಿ ! ಅದು ಮಹತ್ತಮ ಶಕ್ತಿ !
ಅವ್ಯಕ್ತದನುಭೂತಿ ತಾನೆ ಮೈವೆತ್ತಂತೆ
ಭವ್ಯಾತ್ಮನುಸಿರೆ ಘನ ಸಂಗೀತವಾದಂತೆ
ಮುಕ್ತ ಮನ ಮೈದುಂಬಿ ತನ್ನ ಮೈ ಮರೆತಂತೆ
ಭವ್ಯತೆಯ ಭಾವನಾ ಲಹರಿ ಚಿಗುರೊಡೆದಂತೆ
ವ್ಯಕ್ತ ವೇಷದಿ ಸುಪ್ತ ಸಾಮರ್ಥ್ಯಕಿದು ಯುಕ್ತಿ !
ಗಾಳಿಗೂ ಹಗುರಾಗಿ-ಅಮೃತಕೂ ಮೇಲಾಗಿ
ಲೀಲಾ ತರಂಗಿಣಿಯ ಜಲದಲೆಯ ಮೇಲೊರಗಿ
ಕಾಲಮಾನದ ಕಲ್ಪ ತರುವಿನಿನಿವರ್ಣಾಗಿ
ಬಾಳಿನಲಿ ಬಂಧುರತೆ ಬಾನಗಲದಂತಾಗಿ
ನವ್ಯ ಜೀವನ ಸುಧೆಯ ಹೊನಲನ್ನೆ ಹರಿಯಿಸಿದೆ
ದಿವ್ಯ ದೀಪದ ಹಣತೆ ಧರೆಯನ್ನೆ ಬೆಳಗಿಸಿದೆ
ಶತಕೋಟಿ ಕಣ್ಣುಗಳ ನೋಟದಲಿ ಚಿರವಾಗಿ
ವಿತತಯಶ ನಿಂತಿರುವೆ; ವಂದಿಸುವೆ ತಲೆವಾಗಿ !

ಬೆಂಗಳೂರು : ೧೯೪೪

# ಸರ್ವಜ್ಞನಿಗೆ

೧

ಬರೆದ ನುಡಿ ಬಂಗಾರ। ಸರಸತಿಗೆ ಸಿಂಗಾರ।
ಚಿರ ಜೀವಿ ನೀನು ಕನ್ನಡದಿ ಚೆನ್ನಿಗನೆ।
ಸರಿಯಾರು ನಿನಗೆ ಸರ್ವಜ್ಞ ॥

೨

ನಿನ್ನನುಳಿಸಿದ ಕೀರ್ತಿ। ನಿನ್ನ ಬೆಳಗಿದ ಸ್ಫೂರ್ತಿ।
ಮುನ್ನಾರದಲ್ಲ; ಉತ್ತುಂಗಿ ಸಾಹಸದಿ।
ನಿನ್ನನೆತ್ತಿದನು ಸರ್ವಜ್ಞ ॥

೩

ಸರ್ವಜ್ಞ ಉತ್ತುಂಗಿ। ಉರ್ವರೆಗೆ ಚೆಲು ಭಂಗಿ।
ಗರ್ವದಲಿ ಗುರುಗುಟ್ಟಿ ಫಲವೇನು? ಕನ್ನಡಕೆ।
ಇರ್ವರೇ ದೈವ ಸರ್ವಜ್ಞ ॥

೪

ಹೊಗಳಿಕೆಗೆ ಹಿಗ್ಗಿಲ್ಲ। ತೆಗಳಿಕೆಗೆ ತಗ್ಗಿಲ್ಲ।
ಹಗಲಿರುಳು ಜಗದಿ ಜೀವನವ ಪಾವನಗೈಯ್ಯೆ।
ನಗುತ ಬಾ ನೀನು ಸರ್ವಜ್ಞ ॥

೫

ನಿನ್ನ ಕವಿತೆಯು ಚೆಂದ। ನಿನ್ನಛಂದೋ ಬಂಧ।
ಇನ್ನಾರಿಗುಂಟು? ಕವಿ ಸಾರ್ವಭೌಮ ನೀ-।
ಕನ್ನಡಕೆ ನನ್ನಿ ಸರ್ವಜ್ಞ ॥

ಬೆಂಗಳೂರು: ೧೯೪೩

# ಅಮರ ಲೀಲೆ

೧

ಆಕಾಶ ಕುಸುಮವನ್ನಭಿವರ್ಣಿಸುವ ಕಾವ್ಯ
ಇದ್ದೇನು ಸಾರ್ಥಕ್ಯ ? ಕುರುಡಗಣ್ಣು !
ಸಾಕಾರ ದೇವನಿಗೆ ನೈವೇದ್ಯವೇ ಶೂನ್ಯ
ಉದ್ಧಾರ ವೇನಿದಕೆ ? ಘೋರ ಹುಣ್ಣು !

೨

ಹಣವಂತ ಮಾನವನ ಹೆಣಗೈದರೂ ತೃಪ್ತಿ
ಇಲ್ಲೆಂದು ಕುದಿಕುದಿವ ಲಾಭಕಾಗಿ;
. ಒಣ ರೊಟ್ಟಿ ಸಿಕ್ಕದೊಲು ಗೈದು ರಕ್ತವ ಹೀರಿ
ಕೊಲ್ಲುವನು ಕೂಲಿಯನು ಸ್ವಾರ್ಥಿಯಾಗಿ

೩

ಹೊಟ್ಟೆಯನು ನೆನೆದಾಗ ಬಟ್ಟೆ ನಿಲುವುದು ಮುಂದೆ
ಬಟ್ಟೆಯುಂಟೇ ಬಟ್ಟೆ ಇಲ್ಲದರಿಗೆ ?
ಸಿಟ್ಟು ರಟ್ಟೆಯೊಳಿಲ್ಲ; ಮೈ ಮೂಳೆ ಗೂಡಮಮ !
ಎಷ್ಟು ದಿನವೀ ಮೋಸ ಕಾರ್ಮಿಕರಿಗೆ ?

೪

ಗಗನ ಮಧ್ಯದ ಗುಹೆಯೊಳಾರುಂಟು ಗೊತ್ತುಂಟೆ ?
ನೋಡ ಬಯಸುವರೊಮ್ಮೆ ನೋಡಿ ಜೋಕೆ !
ಮುಗಿದೀತು ಇಹಪರದ ಕತೆಯೆ ಬಲು ಎಚ್ಚರಿಕೆ
ಗುಡುಗು ಮೋಡದ ಸಿಡಿಲು ಕಾಣಬೇಕೆ ?

೫

ವಿಷಮತೆಯ ವಿಷವದೋ ಹೊನಲಾಗಿ ಹರಿಯುತಿದೆ
ಜೀವ ಕೋಟಿಯ ಕೊಂದು ಮುಂದೆ ಸಾಗಿ
ಕಸಕೆ ಕಸವರವೆಂದು ಬಾಯ್ಬಿಟ್ಟು ಚೀರುತಿದೆ
ಸಾವು ಕಾದಿದ್ದರತಿಯಾಶೆಯಾಗಿ

೬

ಧನದ ಧರ್ಮವು ಕೂರ ಬಲು ಘೋರವಾಗುತಿದೆ
ಜನವೆಲ್ಲ ಕಾಲ ಹುಡಿ ಉಸಿರಿದ್ದರೂ
ಘನವು ಕಿರಿದಾಗದಿರೆ ಬಾಳು ಬರಡಾಗಲಿದೆ
ಕನಸು ಮನಸಿನ ಮಂತ್ರ ಮಿಡಿದಿದ್ದರೂ

೭

ತೇಜಸ್ಸು ತುಂಬೋಣ ಕಾವ್ಯ ವೀಣೆಯ ಮಿಡಿದು
'ಲೇಖನಿಯು ಕೂರಸಿ' ಯಿದೆಂದು ತೋರಿ
ಓಜಸ್ಸು ನಮಗೆಲ್ಲ ಧೀ ಶಕ್ತಿ ನೀಡಲದು
ನಾಕವನೆ ನಿರ್ಮಿಸುವ ಹಾಡಿ ಹಾರಿ

೮

ಜೀವಂತ ಸಾಮ್ರಾಜ್ಯ ಮೈವೆತ್ತು ನಿಂತಿರಲಿ
ಸುಖ ಜೀವ ನಾಡಿಯದು ಶಾಂತಿಕಣ್ಣು !
ಭಾವನೆಯ ಭಾಗ್ಯ ಸುರನಾರಿ ಕೆಲಸಾರಿರಲಿ
ಮುಖವೆ ಸ್ವರ್ಲೋಕವಾಗಿರುವ ಹಣ್ಣು.

೯

ದಿನದ ಮೊಳೆತದ ಮುನ್ನ ಕಾರಿರುಳು ಕೊರೆದಿತ್ತು
ಕಣ್ಣನ್ನೆ ಕೈಸನ್ನೆ ಕಾಣದಂತೆ !
ಮನಕೆ ಮೋಡಿಯ ಮಾಡಿ ತನ್ನ ತಾ ಮರೆಸಿತ್ತು
ಶ್ರಮಜೀವಿ ಬಲೆಯಿದನ್ನರಿಯದಂತೆ- !

೧೦

ಬದುಕುವಾಸೆಯು ಯಾರಿಗಿಲ್ಲವೋ ನಿಜ ಹೇಳಿ
ಎಲ್ಲ ಹೋರಾಟವೂ ಬದುಕಿಗಾಗಿ
ಮುದದಿಂದ ಬಾಳಗೊಡಿ ಬಡವವನು ಬಲ್ಲಿದರೆ
ಇಲ್ಲದಿರೆ ದುಡಿವನವ ಕ್ರಾಂತಿಗಾಗಿ

೧೧

ನೆತ್ತರೋಕುಳಿಯಾಡಿ ತನ್ನಗೋರಿಯ ಕಟ್ಟಿ
ಕೀರ್ತಿ ಗುಡಿ ನಿಲ್ಲಿಸುವನದರ ಮೇಲೆ
ಸುತ್ತಲೂ ಸಾಮ್ರಾಜ್ಯ ಚಾಚುವೊಲು ಮನಮುಟ್ಟಿ
ದುಡಿವ ಜೀವಿಯು ದುಡಿತ "ಅಮರ ಲೀಲೆ"

ಬೆಂಗಳೂರು: ೧೯೪೪.

# ಪ್ರಣತಿ

ಮುಗಿಲ ಮುಸುಕಿದ ಮೋಡ ಮರೆಯಾಗಿ ನಿಂತಂತೆ
ಜಗದಗಲ ಜೀವನದ ನದಿಯು ಸೆಲೆಯೊಡೆದಂತೆ
ಹಗಲು ರಾತ್ರಿಯು ಸುಪ್ತ ಚೇತನವೆ ನೆಗೆದಂತೆ
ಮಿಗಿಲಾಗಿ ಮನದಂತರಂಗದಲಿ ಸುಳಿದಂತೆ
    ಸಂಗೀತ ದಧಿ ದೇವಿ ತಾನೆ ಮೈ ಮರೆತಂತೆ
    ಮಧುರ ಮೂರ್ತಿಯ ಮೃದುಲ ಮಾತಿನಿನಿದನಿಯಂತೆ
    ಮಧು ಜೀವಿ ಗಾಯನದ ತಾನದಲಿ ತೊನೆವಂತೆ
    ಶೃಂಗಾರ ಸಾಗರದ ಸೂಕ್ಷ್ಮ ತೆರೆ ಸರಿದಂತೆ
ಚಂದ್ರ ಲೋಕದ ಬಿಂಬ ಕಣ್ಣ ಕೋರೈಪಂತೆ
ಸೌಕುಮಾರ್ಯದ ಸೃಷ್ಟಿ ಸೆರೆ ತೊರೆದು ಬಂದಂತೆ
ಮುಕುತಿ ಮಾಯೆಯ ಮಂತ್ರ ಕರ್ಣದಲಿ ಮಿಡಿದಂತೆ
ಇಂದ್ರನೈರಾವತವೆ ಮನಬಿಚ್ಚಿ ನಡೆದಂತೆ
    ಬಂತಿದೋ ನಾಡಿನೀ ಸುಪ್ರಭಾತದ ಮೂರ್ತಿ
    ನಿಂತಿರಲಿ ಚಿರವಾಗಿ ನಾಡದೇವಿಯ ಪ್ರಣತಿ

ಬೆಂಗಳೂರು: ೧೯೪೫.

# ಯಾವ ಹಾಡನು ನಾ ಹಾಡಲಿ?

ಯಾವ ಹಾಡನು ನಾ ಹಾಡಲಿ ?
ನನ್ನ ಮುದ್ದು ಮುದ್ದಿನ ರನ್ನ ಮೋಹನ ||ಪಲ್ಲ||

ನಿನ್ನ ಸುಂದರ ವದನಾರವಿಂದ
ನನ್ನ ಜೀವನ ಭ್ರಮರಕೆ ಮಕರಂದ || ೧ ||

ನಿನ್ನ ಹೊಳೆಯುವ ಕಳೆಯುಳ್ಳ ಕಣ್ಣು
ನನ್ನ ತನುವೆಂಬ ತರುತಳ್ತ ತನಿವಣ್ಣು || ೨ ||

ನಿನ್ನ ಸಂಪಿಗೆ ಹೂವಿನ ಮೂಗು
ನನ್ನ ಸಂತೋಷಕೆ ಬಲು ಮೆರಗು || ೩ ||

ನಿನ್ನ ತುಂಬಿದ ಮೋಹಕ ಗಲ್ಲ
ನನ್ನ ಪ್ರೀತಿಯ ತಿನಿಸಾದ ಬೆಲ್ಲ || ೪ ||

ನಿನ್ನ ಮೃದುವಾದ ಚೆಂದ ಮುಂಗುರುಳು
ನನ್ನ ಆನಂದ ರನ್ನದ ಹರಳು || ೫ ||

ನಿನ್ನ ಬಳುಕುವ ಬಂಧುರ ಬೆರಳು
ನನ್ನ ಮನದಾಸೆಯ ಒಳತಿರುಳು || ೬ ||

ನಿನ್ನ ಕೈಬೆರಳ ಬಂಗಾರದುಂಗುರ
ನನ್ನ ಬಾಳ ಬೆಳಕಿನ ಭವ್ಯ ಸಿಂಗಾರ || ೭ ||

ನಿನ್ನ ಕಾಲಲ್ಲಿ ಉಲಿಯುವ ಗೆಜ್ಜೆ
ನನ್ನ ಮುಂದಣ ಜೀವನಕೆ ಹಿರಿಹೆಜ್ಜೆ || ೮ ||

ಇನ್ನು ಏನೆಂದು ಹೊಗಳಲಿ ನಾನು ?
ಚೆನ್ನ ಶಬ್ದ ಸಾಕಾದಾವೇನು ? || ೯ ||

ಇದು ತಾಯಿಯ ತುಂಬಿದ ಕರುಳು
ಅದೆ ಕಾವ್ಯಕು ಮಾಡಿತು ಮರುಳು ॥ ೧೦ ॥

ನೀನೆ ನನ್ನ ಭಾಗ್ಯದ ಗೋವಿಂದ
ನೀನೆ ನನ್ನನುದ್ಧರಿಸೋ ಮುಕುಂದ ॥ ೧೧ ॥

ಬೆಂಗಳೂರು: ೧೯೪೪.

# ಹೊಸ ವರುಷದ ಹೊಸ್ತಿಲಿನಲಿ

ಹೊಸ ವರುಷದ ಹೊಸ್ತಿಲಿನಲಿ ಹೊಂಗಿರಣದ ಚೆಲುವು
ಹೊಸಕಾಲದ ಹೊಸ ತಿಳಿವಿನ ನಲವಿನ ನವ ಜಲವು
ಹೊಸತಾಗಿಸಿ ಹಳ ಬಾಳನು ತರಲಿದೆ ಮಾ ಗೆಲುವು
ಕಸ-ಕಸವರ ವಾಗಲಿದೆ
ಬಿಸ-ರಸದಲಿ ಮುಣುಗಲಿದೆ !
ಕಿವಿ ಕೇಳದ ಕರ್ಕಶ ದನಿ ಇಂಚರವಾಗಲಿದೆ
ಸವಿ ಸೂಕ್ಷ್ಮದ ಸುಂದರ ತನು ಮನದಲಿ ಬಾಗುತಿದೆ
ಕವಿ ಕಾಣುವ ದಿವ್ಯಾಂಬರ ತಾ ವ್ಯೈಗೊಳ್ಳುತಿದೆ
ಕಾಣದ ಕಣ್ಣಿಗೆ ಹೊಸತು
ಕಾಣುವ ಕಣ್ಣಿಗೆ ಹಳತು !
ಶಬ್ದಬ್ರಹ್ಮಾಂಡದಲಿದು ನಿಶ್ಶಬ್ದವು ಕಾಣೋ !
ಅಬ್ದನ ಅಪ್ರಾರ್ಥಿತ ವರ; ವೈರವ ನೀಮಾಣೋ !

* * *

ಬರುವುದಕದೊ ಬಾಯಾರಿಕೆ ತಲ್ಲಣಿಸಿದೆ ತಿರುಗಿ
ಕೊರಗನು ತೊರೆ ನವ ಚೇತನ ಬರುತಿಹುದದೊ ಮಿನುಗಿ

ಬೆಂಗಳೂರು: ೧೯೪೪.

# ಅನುಮಾನವೇಕೆ ಕವಿ?

ಕಲ್ಪನೆಯುರಂಕೆಗಳ ಭಾರವನು ಬಲ್ಲೆಯೋ ?
ತೂಗಿ ತಾಗದ ಗಾಳಿ ಗೋಪುರದ ತುದಿಗೇರಿ
ಬಾಗಿ ಬಾಗದ ಭವ್ಯ ಮೂರುತಿಯ ಮನಸೇರಿ
ಕಲ್ಪ ಕಲ್ಪಾಂತರದ ಕತೆ ಹೇಳ ಬಲ್ಲೆಯೋ ?
ಪುಣ್ಯ ಪಾಪವ ತಿಕ್ಕಿ ಹೊಸೆದು ಬತ್ತಿಯ ಮಾಡಿ
ಪೂರ್ಣ ಪಾವನ ಸ್ವರ್ಣ ರೇಣುವಿನ ತೈಲದಲಿ
ಪ್ರಾಣವನು ಪರ್ಣಕ್ಕು ಕೀಳೆಂದು ತಿಳಿದಲ್ಲಿ
ಗಣ್ಯ ಪುರುಷನ ಘೋರ ದೀಪದುರಿಯನು ನೋಡಿ
ಹಾ ! ಎಂದು ಕಿರುಚದಿರು ! ಹೋ ! ಎಂದು ಹಾರದಿರು !
ತಾ ! ಎಂದು ಕೇಳದಿರು ! ಛೀ ! ಎಂದು ಎನಿಸದಿರು !
ಕರ್ಮ ಚರ್ಮಕೆ-ಜೋಡಿ ! ಇನ್ನೇಕೆ ಆ ಹಾದಿ !
ಧರ್ಮ ಪ್ರಜ್ವಲಿಪ ಕಿಡಿ ಮುನ್ನವೂ ಅದೆ ಬೀದಿ !
ಮನುಜ ಮಾದೇವನಪ್ಪನ್ನೆವರವಿದು ಬೂದಿ
ಅನುಮಾನವೇಕೆ ಕವಿ ? ಇದಕೆಂಬೆ ದುಷ್ಟವಿಧಿ !

ಬೆಂಗಳೂರು: ೧೯೪೨.

# ಯುದ್ಧ ಮುಗಿಯಿತು

೧

ಯುದ್ಧ ಮುಗಿಯಿತು ಎಂಬ ಮಾತಿನ
ಹಿಂದೆ ನಿಂತಿದೆ ಸೂಚನ
ಮದ್ದು ಗುಂಡಿನ ಅಣುಸ್ಫೋಟನ;
ಮೃತ್ಯು ಮಾರಿಯ ನರ್ತನ

೨

ಕಣ್ಣು ಕಾಣದ ಅಣುವಿನಣುವೇ
ಜಗವ ನುಂಗಲು ಬಂದಿದೆ;
ಮಣ್ಣು ಕಣದತಿ ಸೂಕ್ಷ್ಮ ರೂಪವೆ
ಮುಗಿಲ ಮೇರೆಯ ಮೀರಿದೆ

೩

ಕಿರಿದರಲಿ ಕಿರಿದಾದ ಜಡಕೂ
ಹಿರಿಯ ಚೇತನ ತುಂಬಿದೆ
ಬರಿದು ಬಯಲಿನ ಬಾಯ ಜಳಕೂ
ಅಗ್ನಿದೇವನ ಕಾವಿದೆ

೪

ದೀನಮಾನವ, ದೇವ-ದಾನವ
ರನ್ನು ಮೀರಿಸಿ ನಿಂತನು;
ಏನಿದದ್ಭುತ ಬಂತು ಜಗದಲಿ
ಎಂಬುದನು ತುಳಿದಿಟ್ಟನು

೫

ತನ್ನ ಶಕ್ತಿಗೆ ತಪದ ಬೆನ್ನಿದೆ
ನೆಳಲು ಕಾರ್ಯದ ಹಿನ್ನೆಲೆ
ಚಿನ್ನ ಹೊನ್ನಿನ ಹೊಳಪು ಹೊಮ್ಮಿದೆ
ಮಳಲುರಾಸಿಗೆ ಒಮ್ಮೆಲೆ

೬

ಅಂತರಂಗವನರಿತ ಮೇಲೆಯೆ
ಸೂಕ್ಷ್ಮ ತೆರೆದೊರೆ ದೊರೆವುದು
ಸಂತತವು ಬರಿ ಜೀವದೆಲೆಯೇ
ಚಿಗಿತು ಮಲಮಲವೆನುವುದು

ಬೆಂಗಳೂರು: ೧೯೪೬.

# ಅರಿಯೆ ಜಾಣತನವಿದು

೧

ಮಣ್ಣ ಕಣ್ಣು ಮಣ್ಣ ನೋಡಿ
ಬಣ್ಣದೊಡಲ ಬಾನ ಬೇಡಿ
ಬೆಣ್ಣೆ ಬಾಳ ಕಲ್ಲು ಮಾಡಿ
ಕಂಡು ಕಾಣದಂತೆ ಇಹುದು !

೨

ಜಗವೆ ಮಣ್ಣು ಮಣ್ಣೆ ಜಗವು
ಸೊಗಕೆ ದುಃಖವೆಂಬ ನೊಗವು
ಬಗೆಗೆ ಬಹಳ ದೂರ ದರಿವು
ನಿಜ ನಿಜವೆಂದೆನ್ನುತಿಹುದು

೩

ತಿಳಿವು ಬಾಳಿಗಿರುವ ಕಣ್ಣು
ಕಳೆದ ಕಷ್ಟ ಮನಕೆ ಹೊನ್ನು
ಬೆಳೆಗೆ ಸರಿಯಿದಾವುದಿನ್ನು?
ಅರಿಯೆ ಜಾಣತನವಿದು!

ಬೆಂಗಳೂರು : ೧೯೪೩.

# ಜೊತೆ ಬಾಳು

೧

ಆಳಬಹುದು ಬೀಳಬಹುದು
ಅರಸು ಮನೆತನ
ಬೆಳೆಯು ಬೆಳೆದು ಉಂಡು ಉಳಿವ
ಮನುಜ ದಿನ ದಿನ

೨

ಹೆಣ್ಣು ಗಂಡು ಕೂಡಿಕೊಂಡು
ಜಗವ ಬೆಳಸಿವೆ ;
ಮಣ್ಣಿಗಾಗಿ ಕೇಣಗೊಂಡು
ಸೊಗವನಳಿಸಿವೆ

೩

ಬಾಳಿನೊಡನೆ ಬೆಳೆದು ಬಂದ
ಕತೆಯು ಮರೆವುದು ;
ಕಾಳೆಗವಿರೆ ಜೊತೆ ಬಾಳಿನ
ಸಂತೆ ನೆರೆವುದು

*　　　*

ಜೊತೆ ಬಾಳಿದು ಶಾಶ್ವತ –
ಎಂದೆಂದಿಗು ನಿಶ್ಚಿತ

ಬೆಳಗಾವಿ : ೧೯೪೦

# ಕವಿ-ಕಾಲ

ಸ್ಯಾದಸ್ತಿ ಸ್ಯಾನ್ನಾಸ್ತಿ ಸ್ಯಾದಸ್ತಿ ನಾಸ್ತೀತಿ- !
ಸ್ಯಾದವಕ್ತವ್ಯವೋ ? ವಾಚಾಮಗೋಚರವೋ ?
ಇಂದ್ರಿಯಾತೀತವೋ ? ಖಲು ಜ್ಞಾನ ಬ್ರಹ್ಮವೋ ?
ಆದ್ಯಂತ ರಹಿತ ನಾಕಾರ ಶೂನ್ಯಂ ದಿಟಂ
ಎಂಬೀನಿನಾದದಲಿ ತಥ್ಯಾಂಶವಿದೆ; ಸಹಜ !
ನಾ ಬ್ರಹ್ಮ ನೀ ಬ್ರಹ್ಮ; ಕಾಂಬುದೆಲ್ಲವು ಬ್ರಹ್ಮ!
ಬ್ರಹ್ಮನಿಂ ನಾ ಬೇರೆ; ಜೀವಾತ್ಮ ಪರಮಾತ್ಮ
ದ್ವೈತದಲಿ ದೇದೀಪ್ಯಮಾನವಾಗಿದೆ; ಸತ್ಯ;
ಸೊಲ್ಲಿನಲಿ ಶಬ್ದಾರ್ಥ ಬೆರೆದಂತೆ ಶಿವ-ಶಕ್ತಿ
ಒಂದಾಗಿ ಬೆಳಗಿಸಿವೆ ಜಡವ ಚೇತನಗೊಳಿಸಿ;
ಅಪರ ವಸ್ತುವ ನಂಬಿ ನಡೆವರೇ ಬಹಳ ಜನ
ಆದರೂ ನಾಸ್ತಿಕರು ತಲೆಯೆತ್ತಿ ನಿಂತಿಹರು
ಕಾಲ ಪ್ರವಾಹದಲಿ ಕೊಚ್ಚಿ ಹೋಗದೆ ಏಕೆ ?
ಬುದ್ಧಿ ಬೆಳವಣಿಗೆಗಿದು ಬೆನ್ನೆಲುಬು; ಶಾಶ್ವತಂ !
ಭಾವನಾ ಸ್ವಾತಂತ್ರಕಿದು ಬೆಲೆಯು; ಇಲ್ಲದೊಡೆ
ಬರಿಕಾಡು, ಮಾನವ್ಯದಂತಸ್ತು ಮುಗಿಲಿನೊಲು
ವೈಶಾಲ್ಯ ಸಾಗರದ ಗಾಂಭೀರ್ಯಮಂ ತಳೆದು
ಚಾಚಿಹುದು ಸಪ್ತ ಸಾಗರದಾಚೆ-ಇದು ಊಹೆ !
ಊಹೆಯನು ಮೀರಿ ನಿಂತಿದೆ ತನ್ನ ಶಕ್ತಿಯನು
ಶೂನ್ಯದಲಿ ನೆರೆತುಂಬಿ; ಘನಘೋರ ಗಂಭೀರ
ನೋಟವಿದ ನೋಡೆ ಮನುಜನ ಚರ್ಮ ಚಕ್ಷುಗಳು

ಚೈತನ್ಯವಳಿದು ನಿಂತಿವೆ; ಧರ್ಮದಾರಿಯನು
ತೋರುವಡೆ ಸಾರ್ಥಕ್ಯ ! ಧರ್ಮಹಾಳಾಗಿಹುದು
ಪ್ರೇಮಪ್ರೇತವ ತಬ್ಬಿ ವಿಕಟಾಟ್ಟಹಾಸದಲಿ-
ಕುಣಿಯುತಿದೆ !
ಓ! ಸಾಕು! ಕವಿವರ್ಯ ನಿನ್ನ ಘನ
ಪಾಂಡಿತ್ಯ ದರ್ಶನಂ; ಇದನಾರು ಓದುವರು ?
ಕಾಲ ಬದಲಾಯಿಸಿದೆ; ಕೋಟಿಗಟ್ಟಳೆ ಜನರು
ಆನಂದದಿಂದೋದಿ ನಲಿದುಲಿವ ಸಾಹಿತ್ಯ
ನಿರ್ಮಿತಿಗೆ ನೀ ತೊಡಗು; ಇಲ್ಲದಿರೆ ನೀಸತ್ತು
ಸಾಹಿತ್ಯವನು ಕೊಂದು ನಾಡದ್ರೋಹವ ಬಗೆದು
ಮಣ್ಣಾಗಿ ಮಲಗುವೆಯೊ! ಇಂದಿನೀ ಓಘವನು
ದಿಟ್ಟಿಸೆಲೊ ! ಕುರುಡನೊಲು ಹಗ್ಗವನು ಹೊಸೆದೊಡೇಂ
ಸಂದೀತು ? ಕಾಲವನ್ನನುಸರಿಸಿ ಕವಿಸಾಗೆ
ಬುವಿ ಸ್ವರ್ಗ ವಿಷವಮೃತವಾದಂತೆ ! ಇಲ್ಲದಿರೆ
ಕಾವ್ಯ ಶಬ್ದದ ಕಂತೆ ,ಹಾಳೂರ ಬರಿಸಂತೆ !!

ಬೆಂಗಳೂರು: ೧೯೪೪.

# ಎದುರಿಸಲೊ

ಮಾನವಿರಲಿ ಇರದಿರಲಿ
ಬರೆಯಬೇಕು
ಹಣ ಕೊಡಲಿ ಕೊಡದಿರಲಿ
ದುಡಿಯಬೇಕು !
ಮಾತು ಮಾತಿಗೆ ತಪ್ಪನೆಣಿಸಿದರು ಹೌದೆಂದು
ಬೀತ ನರಪೇತನೊಲು ಯೋಗ್ಯತೆಯ ಮರೆತಿಂದು
ಸೋತ ಕಾಲಿನ ಕುಣಿತ ನಿಂತರೂ ನಿಲದೆಂದು
ಪ್ರೇತವಾಗಿದ್ದರೂ ಸ್ಫೂರ್ತಿ ನನಗುಂಟೆಂದು –
ತಿಳಿದು ಹೊಟ್ಟೆಯ ಹೊರೆವ ಬಾಳು ಬಾಳೆ ?
ಕೊಳೆತು ನಾರುವ ರಕ್ತ ಮಾಂಸ ಮೂಳೆ !
ನೆತ್ತರಿನ ಕಾಳ್ಕುದಿತ ಹೆಚ್ಚಿದೊಡವೇನುಂಟು ?
ಸತ್ತು ಸುಖಿಸುವುದೊಂದೆ ಬಾಕಿಯುಂಟು
ಅತ್ತತ್ತು ಕಂಬನಿಯ ಕಾಲುವೆಯ ಹರಿಸಿದರು
ತುತ್ತು ಕೂಳಿಗೆ ಕಾಲಿನೊದೆತ ಕೊಸರು !
"ನನ್ನ ಕೂಲಿಯು ನೀನು ; ನಾನೀಯೆ ನಿನಗುಂಟು
ನನ್ನ ಧರ್ಮದ ನೆಳಲಿನಲ್ಲಿ ನೀನು
ನನ್ನಿಂದಲೇ ನೀನು-ನಿನಗೆಲ್ಲಿ ಅಸ್ತಿತ್ವ ?
ನನ್ನ ಕಾಲಿಗೆ ಬೀಳು ದೇವ ನಾನು"
ಎಂಬ ಮಾತನು ಕೇಳಿ
ತುಂಬ ರೋಷವ ತಾಳಿ
ಜೀವ ಹೋರಾಟಕ್ಕೆ ಹೊಂಚುತ್ತಿದೆ
ಸಾವಿನರಮನೆಗಾಗಿ ಬಯಸುತ್ತಿದೆ !

ಜೀವಿಗೆಲ್ಲಿದೆ ಸಾವು
ಸಾವಿಗೆಲ್ಲಿದೆ ನೋವು !
ಇದರಂತರಂಗವನ್ನರಿಯ ಬೇಕು
ಪದರುಗಳ ಪರ್ಯಂತ ಸಾಗಬೇಕು
ಕಂಡು ಕಾಣುವ ವಸ್ತುಗಳಿಗೆಲ್ಲ ಸಾವಿಲ್ಲ
ಎಂದೊ ಸಾರಿದ ಮಾತು ; ಇಂದೆ ಅಲ್ಲ ;
ದಂಡು ದಾಳಿಗಳಿಂದ-ಅಣುವಿಂದ ಕೊನೆಯಿಲ್ಲ
ಮುಂದಕೂ ಇದೆ ಮಾತು–ಸಟೆಯಿದಲ್ಲ
ಎನಿತು ಕೂಗಿದೊಡೇನು ನಿರ್ವಾತ ತಾಣದಲಿ ?
ಅನಿತು ದೈಹಿಕ ಶ್ರಮವೆ ಅಲ್ಲವೇನು ?
ಹೆಚ್ಚು ಮಾತಿಂದೇನು ? ಹುಚ್ಚುತನವಾದೀತು
ಮುಚ್ಚು ಕಣ್ಣನು ಮತ್ತೆ ತೆರೆಯದಂತೆ !
ನೈರಾಶ್ಯ ಭಾವನೆಯು ಬೇರು ಚಿಗುರೊಡೆದಂತೆ -
ಕಾಣುತಿದೆ ; ಸತ್ಯವೋ ? ಏನೋ ಎಂತೊ ?
ಸ್ವೈರವೃತ್ತಿಯು ರಣದಿ ಆಶಾನಿರಾಶೆಗಳು
ಗೊಣಗುತ್ತಿದ್ದರು ಸರಿಯೆ-ಏನು ಚಿಂತೆ ?

*   *   *

ಎದುರಿಸೆಲೊ ಬಂದುದನು ಬಂಟನಂತೆ –
ಮುದುರಿದರೆ ಸಾಯುವಿಯೊ ಹುಳುವಿನಂತೆ !

ಬೆಂಗಳೂರು: ೧೯೪೬.

# ಬಡತನ ಸಿರಿತನ

೧

ಬಡತನ ಸಿರಿತನ
ಕಡೆತನ ಕುಳದಾವೇನ?
ಅದಕಂತ ತನನನ ಹಾಡೋಣ!
ಬಾಳನ್ನು ಬಂಗಾರ ಮಾಡೋಣ!
ಗೋಳೀನ ಸಂತೆಯು ಮರೆಯೋಣ!

೨

ಸಾವು ನೋವಿನ ಸುಗ್ಗಿ
ಯಾವ ಬಾಳಿಗೆ ನುಗ್ಗಿ
ಕಣ್ಣೀರ ಕರೆವಂತೆ ಮಾಡಿಲ್ಲ?
'ಅಯ್ಯೋ' ಎಂದಾರನು ನುಡಿಸಿಲ್ಲ?
ಮುಯ್ಯಿಯೆ ಇದು ಎಂದು ಅನಿಸಿಲ್ಲ?

೩

ಅದು ಇಲ್ಲ; ಇದು ಇಲ್ಲ
ಬದುಕೀಗೆ ಬೆಲೆಯಿಲ್ಲ
ಎಂದೆಂದು ಕೂಡುವ ದಿನವಲ್ಲ!
ಮನುಜನ ಶಕ್ತಿಯು ಮಿತಿಯಿಲ್ಲ
ಸಾಹಸ ಜೀವಿಗೆ ಇದೆ ಬೆಲ್ಲ!

೪

ಬಂದದ್ದು ಬರಲೆಂದು
ತಿಂದದ್ದೆ ಬಂತೆಂದು
ನಮ್ಮ ಹಾದಿಯ ನಾವು ಹಿಡಿಯೋಣ
ಚಂದ ಚಂದ್ರಾಮನ್ನ ನೋಡೋಣ
ಸುಂದರ ಸೃಷ್ಟಿಗೆ ಬಾಗೋಣ

೫

ಅವರೇನು ಅಂದಾರು ?
ಇವರೇನು ತಂದಾರು ?
ಎಂದಂದು ಧ್ಯೇಯವ ಮರೆತೇವು ?
ಹಾಳು ರಾಗವ ಮತ್ತೆ ಹಾಡೇವು ?
ಬೀಳುವ ಭಾರಕೆ ಸಿಕ್ಕೇವು ?

೬

ಹಾರಿ ಹೋಗುವ ಹಕ್ಕಿ
ದೂರ ಕಾಣುವ ಚಿಕ್ಕಿ
ನಮ್ಮ ಜೀವನ ಸುಧೆಯ ಬೇಡ್ಯಾವು
ತಮ್ಮ ಬಾಳಿನ ಕತೆಯ ಹೇಳ್ಯಾವು
ಒಮ್ಮೆಗೆ ನಮ್ಮನ್ನೆ ಮರಸ್ಯಾವು

೭

ಸುಖ ದುಃಖ ಸರಿ ಸಮ
ಬಾಳಿದು ಘಮ ಘಮ -
ವೆಂದೆಂಬ ಹೂವೆಂದು ತಿಳಿಯೋಣ !
ಅದರ ಸುವಾಸನೆ ಬೇಡೋಣ !
ಕಿತ್ತೊಮ್ಮೆ ತಲೆಯಲ್ಲಿ ಮುಡಿಯೋಣ !

೮

ಕಾಳಗ ಗೀಳಗ
ಕಾಲಾನ ಕಾಲಾಗ
ಮೇಲೆ ಕೆಳಗೆಲ್ಲೆಲ್ಲೊ ನಡೆದಿರಲಿ
ಹೆಣ್ಗಂಡಿನನುರಾಗ ಚಿಮ್ಮಿರಲಿ
ಕಣ್ಣಿಗೆ ಹೊಸಯುಗ ಹುಟ್ಟಿರಲಿ

೯

ಶಾಂತಿಗೀಂತಿಯ ಮಂತ್ರ
ಕ್ರಾಂತೀಗೆ ಅತ್ತಂತ್ರ–
ಅಂತಂಬೋರೀ ಕಡೆ ಕಣ್ತೆರೀಲಿ
ಭ್ರಾಂತಿಯ ಹೆಣವನ್ನು ಹೂಳಿಡಲಿ
ಯಂತ್ರಕೆ ಕೊನೆಗೊಮ್ಮೆ ಶರಣೆನ್ನಲಿ

೧೦

ಮಾನವ ದಾನವ
ನಾಗಿಹ ಕಾಲವ
ಕಣ್ಣಾರ ಕಂಡೆವು ಈ ದಿನದಿ
ಮುನ್ನೇನೋ ಎಂತೆಂಬ ಎದೆಗುದಿ
ಕೈಚಾಚಿ ನಿಂತಿದೆ ಕ್ರೂರವಿಧಿ

೧೧

ಗೆಜ್ಜೆ ಕಾಲಿನ ಹೆಜ್ಜೆ
ವಜ್ಜೇನ ನೀ ಹುಚ್ಚಿ
ತ್ರಾಂ ತಥ ಥೈ ಥೈ ! ಅಂತಿರಲಿ !
ತಾಳಕ ಸರಿ ಹೆಜ್ಜೆ ಬೀಳ್ತಿರಲಿ
ಬಾಳಿನ ಸಿರಿ ಸುಗ್ಗಿ ಸುರಿದಿರಲಿ

೧೨

ಗಂಡನ ಕಣ್ಣಿಗೆ
ಹೆಂಡತಿ ಹೊನ್ನಾಗೆ
ಕಹಿಯೆಲ್ಲ ಸಿಹಿಯಾಗಿ ರುಚಿಸೀತು !
ಬೆಂಡು ಬೆತ್ತಾಸವ ಮರೆಸೀತು
ಕೆಂಡವು ತಣ್ಣಗೆ ಅನಿಸೀತು

೧೩

ಬಾಳೋಣ ನಗನಗತಾ
ಗೋಳನು ಚಿಮ್ಮುತಾ
ಚೆಂದ ಚೆಂದದ ಕತೆಯ ಹೇಳುತ್ತ !
ನೊಂದವರ ಪಾಡೀಗೆ ಮರುಗುತ್ತ !
ನಂದನವನವನ್ನ ಕಾಣುತ್ತ !

೧೪

ಮಾಡಿ ಬಾಳಿನ ಸುಗ್ಗಿ
ನೋಡಿ ಜೀವನ ಹಿಗ್ಗಿ
ಮುಂದೆಯೂ ಬಾಳೋಣ ಸುಖದಿಂದ
ಎಂದಾದರೇನಂತೆ ಜಗ ಚಂದ
ಹಿಂದಕೆ ಸರಿ ಬೇಡ ನೀನಿಂದ

೧೫

ಹೆಣ್ಣಿನ ಹೊನ್ನಿನ
ಮಣ್ಣಿನ ನಿಜವನ್ನ
ತಿಳಿದವರುಂಟೇನು ಜಗದಲ್ಲಿ ?
ಕಳವಳವಾಯಿತೆ ಮನದಲ್ಲಿ ?
ಹೆಣ್ಣಿಂದೆ ಜಗವೆಲ್ಲ ಹುಚಮಲ್ಲಿ !

೧೬

ಏನಿದ್ದರೇನಂತೆ
ಸಾಕು ಜೀವನ ಚಿಂತೆ -
ಕಯ್ಯಾಗ ಕೈಕೊಡು ನನ ಭಂಗಾರ
ಮೈಯ್ಯಾಗ ಮೈ ನೆಡಲದು ಶೃಂಗಾರ
ಆ ಬಾಳಿ ನಿಜವಾಗಿ ಬಹು ಸುಂದರ

೧೭

ಬಡತನ ಸಿರಿತನ
ಕಡೆತನಕುಳದಾವೇನ ?
ಅದಕಂತ ತನನನ ಹಾಡೋಣ !
ಮುದವನ್ನ ಎಲ್ಲೆಡೆ ಚಿಮ್ಮೋಣ
ಹದವರಿತು ಕುಣಿಕುಣಿದು ದಣಿಯೋಣ

ಬೆಂಗಳೂರು: ೧೯೪೩

# ಬಾಪೂಜಿಗೆ

ಜಗದಗಲ ಮುಗಿಲಗಲ
ನಿನ್ನ ಮನ ಭಾವನಾ !
ಹಗಲಿರುಳಿಗು ಆದೆ ಮೂಲ
ನಿನ್ನ ದೃಷ್ಟಿ ಮೋಹನ !

ಇಡಿ ಜೀವನ ಪಾವನ !
ಇದು ಅರ್ಪಣ ತನುಮನ
ಬರಲಿ ಶಕ್ತಿ-ಇರಲಿ ಸ್ಫೂರ್ತಿ
ಅದುವೆ ನನ್ನ ಚಿಂತನ

ಬೆಂಗಳೂರು : ೧೯೪೫.

# ಬಹಳ ದಿನದ ಬಾಯಾರಿಕೆ

೧

ಬಹಳ ದಿನದ ಬಾಯಾರಿಕೆ
ಯಾವ ನೀರ ಕುಡಿಯಲಿ ?
ಸಹನೆಯು ಸವಿ ಬಲು ದೂರಕೆ
ಹಾರಿತೇನು ಮಾಡಲಿ ?

೨

ಆವರಿವರೆದೆಗಾವಿಗೆ ನಾ
ಮನ ತೆತ್ತೆನು ಮರುಳ
ಹವಣಿಸುವರ ಹವಣಿಕೆಗತಿ
ದಿನಗಳೆದೆನು ಮರುಳ

೩

ಕಾಂಬುದು ಬೆಳಕೆನ್ನುತೆ
ಇರುಳನೆ ಮರೆತಿರುವೆ
ತಿಂಬುದೆಸೊಡೆ ಎಂದೆನ್ನುತೆ
ಕರುಳನೆ ಹಿಸುಕಿರುವೆ

೪

ಮೇಲೇರುತೆ ಮುಗಿಲಂಗಣ,
ತಿಂಗಳೆ ತವರಾಗಿ
ಕೋಲಾಟದ ನರ್ತಕ ಗಣ
ಚಂಗಳೆ ಚಲುವಾಗಿ

೫

ನಕ್ಷತ್ರವು ಪ್ರತ್ಯಕ್ಷದಿ
ಮಿನುಮಿನುಗುವ ತೆರದಿ
ವಕ್ಷಸ್ಥಲದಪರೋಕ್ಷದಿ
ಜನುಮದ ಕತೆ ಮುದದಿ !

೬

ಜೀವನ ಸಾಗುವ ವರೆಗಿನ
ಕಾಲವು ಬ್ರಹ್ಮಾಂಡ
ಜೀವಿಯ ಬಲು ಕಿರಿಬಾಳಿನ
ಸಾಲವು ಕರ್ಮಾಂಡ !

೭

ಬದುಕಿಗೆ ಭಯ ; ಸೊಗವಾವುದೊ ?
ಅದೆ ಮರ್ಮದ ಮನೆಯು
ಎದೆಯಾಳದ ಸಿಹಿ ಎಲ್ಲಿರುವುದೊ ?
ಅದು ತಿಳಿವಿನ ಕೊನೆಯು

೮

ನಿನ್ನಲ್ಲಿಗೆ ಬಹೆನೆಂದರೆ
ಆಯುಸದಾವೇಗ
ಮುನ್ನೆಲ್ಲಿಗೆ ? ಅದ ನೀ ಮರೆ
ಸಾಕೀ ಒಣ ವೇಗ

೯

ಎದೆಮಾತಿಗೆ ದನಿ ಏರದು
ಕುಗ್ಗಿದೆ ಚಿಗುರದೊಲು
ವಿಧಿಯಾವುದೊ ಬಳಿಬಂದುದು
ಮುಗ್ಗಿತು ಮುರಿವೊವೊಲು

೧೦

ನಿನ್ನಡಿವರೆಗದೊ ಬಂದಿತು
ಹರಕೆಗೆ ಹಾರೈಸಿ
ತನ್ನಯ ವೈ ಮನದುಂಬಿತು
ಹಿರಿಮೆಗೆ ಕೋರೈಸಿ

೧೧

ಎನಿತಾದರೂ ನಲ್ಮೆಯದಿರೆ
ಕಲ್ಲೇ ಮಲ್ಲಿಗೆಯು
ಜನಜನಿತವು, ಆದರುಸಿರಿರೆ
ಇಲ್ಲೇ ನಂದನವು

೧೨

ಬಹಳ ದಿನದ ಬಾಯಾರಿಕೆ
ಯಾವ ನೀರ ಕುಡಿಯಲಿ ?
ಸಹನೆಯು ಸವಿ ಬಲುದೂರಕೆ
ಹಾರಿತೇನು ಮಾಡಲಿ ?

ಬೆಂಗಳೂರು : ೧೯೪೬.

# ಯೋಗಿ ಬಾ!

ಹಠಯೋಗ ಸಾಧಿಸುವ ಯೋಗಿ ಬಾ, ದಿಟವನುಡಿ.
ಕಪಟ ಕಣ್ಣಿನ ಕೂರ ಕಿಡಿ ನೋಟ ಚಿಮ್ಮದಿರು!
ಉಪಚಾರ ವೈಖರಿಯ ವಿಸ್ತರಿಸಿ ಹಿಗ್ಗದಿರು
ಮಠ ಮಾನ್ಯ ಸೌಧ ಗುಡಿ ಗೋಪುರದ ಕಾಲಹುಡಿ
  ಚಿಮ್ಮಿ ಚಿತ್ರಿಸುವ ಘನ ಪುಣ್ಯ ಮೂರ್ತಿಯ ರೂಪ
  ಹೊಮ್ಮಿ ಹೊನ್ನಿನ ಹೊಗೆಯೊಳೊಗೆದ ಸ್ಮರ ಸುರಚಾಪ!
ದಿಕ್ತಟವ ಧೀಂಕಿಟ್ಟು ಹಾರುತಿದೆ; ಹಾ! ನೋಡು!
ಮುಕ್ತ ಮನ ನಿರ್ಲೇಪದಲಿ ನಿಂತು ನಿರುಕಿಸಿತು -
ಯುಕ್ತಿ ಮಾರ್ಗದ ಮಹಾ ತಾಂತ್ರಿಕರ ಗುರುತಿಸಿತು
ಭಕ್ತನೊಲು ಶರಣೆಂದು ನಸಿಗೈಯ್ಯಲಾ ಹಾಡು
  ಜೀವನದ ನೈರ್ಮಲ್ಯ ನಲ್ವಾಸನೆಯ ಪೊತ್ತು
  ಭಾವನಾಪೂರ್ಣ ಸತ್ಕಾವ್ಯವೇ ಮೈವೆತ್ತು
ಆನಂದವೊದವಿಸುವ ಸಂಜೀವಿನೀ ಸುಧೆಯು
ಜ್ಞಾನನಿಧಿ ಪಾದದಲಿ ಪ್ರಸರಿಸಿತು! ಭೋ! ಕಾಯು!

ಬೆಂಗಳೂರು: ೧೯೪೩.

# ಬಾ ಅವರಿಗೆ

ಅಮರ ಜೀವನನವಮಲ ಲತೆಯಲಿಸಿ ಹೂವಾಗಿ
ಪರಮ ಪಾವಿತ್ರ್ಯತೆಯ ಮೂರ್ತಿಗೂ ಮೇಲಾಗಿ
ಸರಲತೆಯ ಸೌಭಾಗ್ಯದಧಿಧಾತ್ರಿ ಚಿರವಾಗಿ
ವಿಮಲ ತೇಜೋರಾಶಿ ಜಗಲತಿಬೆಳಕಾಗಿ
ಜೀವಾತ್ಮ ನದಿಯಲ್ಲಿ ಸರಸಿಜೋದ್ಭವೆಯಾಗಿ
ಜನಮನವ ಮುಗಿಲಿನಲಿ ಧ್ರುವ ತಾರೆ ದಿಟವಾಗಿ
ಅನುರಾಗ ಧವಳಗಿರಿ ಗೌರಿ ಶಂಕರವಾಗಿ
ಭವ್ಯಾತ್ಮನುಸಿರಲ್ಲಿ ಭಾವದೈಸಿರಿಯಾಗಿ
ಓಹೋ! ಮಹಾತ್ಮನ ಮಡದಿ ಮಂಗಳೆಯಾಗಿ
ವಿಶ್ವಜಿದ್ಯಾಗದುರು ಹೊಂಗಲಶದಡಿಯಾಗಿ
ಅಶ್ವಮೇಧವ ಕೋಟಿಗೈದಗೂ ಹಿರಿದಾಗಿ
ಓ! ತಾಯಿ, ನಿಂತಿರುವೆ ಕೀರ್ತಿಸೇರೆಯ ನೀಗಿ
ಧನ್ಯೆ ಕಸ್ತೂರಿ ಬಾ, ಶತಕೋಟಿ ವಂದನಂ!
ಮಾನ್ಯೆ ಹರಸೌ ಬಾಳಿಗಿತ್ತು ನವ ಸ್ಪಂದನಂ!

ಬೆಂಗಳೂರು: ೧೯೪೪.

# ಜನರು ಜನರ ಸ್ವರ್ಗದಲ್ಲಿ

ಬರುವುದೊಮ್ಮೆ ಬರುವುದು
ಬಾರದೆಂದು ಬಾರದು
ಬರುವ ಬಿಡುವ ಭೂತಕಾಗಿ
ಇಂದು ಭಯವದೇಕದು ?

ಗೈವ ಗೈಮೆ ಸಾಗಲಿ
ಮೈ ಮನವ ತುಂಬಲಿ
ಸಾವು ಬದುಕು ನೋವು ನೂರು
ಹಾರಿ ಬರಲು ನಗುತಿರು !

ಕರಿದು ಮೋಡ ಹೊಳೆವುದು
ಬರಿದು ಕೈ ತೀವುದು
ಸಿರಿಯು ಕಣ್ಣ ಮುಚ್ಚಿ ತಾನೆ
ಎಲ್ಲೊ ಎತ್ತೊ ನಡೆವುದು

ಇಳೆಗೆ ಮೇರು ಬರಲಿದೆ
ಬೆಳೆಯು ತುಂಬ ತರಲಿದೆ
ಜಳಕವಾಗ ಗಂಗೆಯಲ್ಲಿ
ಜನರು ಜನರ ಸ್ವರ್ಗದಲ್ಲಿ

*   *   *

ನಲಿದು ಕುಣಿದು ದಣಿವರು
ಒಲಿದು ಉಲಿದು ತಣಿವರು
ಇದೇ ಬೇಕು ಇಂದಿಗೆ
ಎಲ್ಲ ದುಡಿವ ಮಂದಿಗೆ

ಬೆಂಗಳೂರು: ೧೯೪೪.

# ಗೌರಮ್ಮ

ಓ ! ತಾಯಿ, ಮಾತಾಯಿ ಮೇಲೆತ್ತು ಮುಖವನ್ನು
ದೈನ್ಯ ದೃಷ್ಟಿಯುಕ್ತಕಂಗಳನು ಮಿಟುಕಿಸಾ ! ಕವಿಯು
ಕಣ್ತೆರೆದು ನೊಡಿಲ್ಲಿ; ಆವ ಶತಮಾನಗಳ
ಲಾಭ ಹಾನಿಯ ಲೆಕ್ಕವನು ಗುಣಿಸಿ ತಣಿಯುತಿಹೆ !
ಶಿರಬಾಗಿದಾರಿಗೌ ? ಅಚಲಳಾದುದಕೇನು-
ಕಾರಣಂ ? ಮೊಗದೊಳೇಕೀ ಚಿಂತೆ ? ಸಂಸಾರ-
ನಿಸ್ಸಾರ ಮೆಂಬೆಯಾ ಮುತ್ತಜ್ಜಿ ? ಅಲ್ಲದೊಡೆ-
ಮೊಮ್ಮಗನ ಮದುವೆಯಾಗಿಲ್ಲವೇ ? ಮಗಳ ಮಗು
ಮಡಿಯಿತೆ ? ನೆರೆಯುವರು ಮುನಿವರೇ ? ಸಗ್ಗವನು-
ಸೇರಿರುವ ನಲ್ಲ ನೆನಪಾದನೇ ? ಮೈ ಬಟ್ಟೆ-
ಏಕಮ್ಮ ಹರಿದಿಹುದು ? ನಿನ್ನ ಸುಖ ದುಃಖಗಳ-
ಕಂಡು ಮರುಗುವರಿಲ್ಲೇ ? ಟೊಂಕ ಬಾಗಿದ ಮುದುಕಿ
ಎನಿತು ದಿನ ಕುಳಿತಿರುವಿ ? ಮೈ ನೋಯದೇನಮ್ಮ ?
ಹೂಂ ಹೇಳು –ಇನಿತೇಕೆ ಸಂಕೋಚ ನಾ ನಿನ್ನ
ಮಗನೆಂದು ತಿಳಿ ತಾಯಿ.

ಅಯ್ಯೋ, ಬಾಳೇ ಹಾಳು
ಮುದುಕಿ ಮುಗಿಸವ ಕತೆಯು ಹೇಳುವಳು ; ಇದು ನಿಜವೆ ?
ಸುಳ್ಳೆ ಮೈವೆತ್ತಂತೆ ಇವಳ ಕತೆ ; ಕನ್ನಡಿಯು-
ಗಂಟೆನೊಲು ಸಟೆಯೆಂದು ಹೀಗಳಿಸದಿರು ತಮ್ಮ :
ಅರವತ್ತು ವರುಷಗಳ ಬೇಸಿಗೆಯ ಬಿಸಿಲನ್ನು
ನನ್ನ ಮೈ ಕಾಸಿಹುದು ; ಆದೊಡೇಂ ಇನಿತು ದಿನ
ಬದುಕಿದುದು ವ್ಯರ್ಥವಾಯ್ತೈ ಮಗುವೆ ಇನ್ನಾವ

ರೂ ಮರಣ ಬಂದಡಸಬಾರದೇ ಸಾಕು ಸಾ-
ಕೀ ಬಾಳು ನಾಯಿಗಿಂತಲು ಕೀಳು.

ಎನಿತು ನೊಂ
ದಿಹೆ ತಾಯೆ ? ಇನಿತೇಕೆ ಬಾಳನ್ನೆ ಬೀಳುಗಳೆ
ಯುವೆಯಜ್ಜಿ ? ಹೇಳಮ್ಮ ನಿನ್ನ ಕತೆ ಕೇಳುವೆನು
ಮನಗೊಟ್ಟು, ಮುಚ್ಚು ಮರೆ ಇಲ್ಲದಲೆ ಎಲ್ಲವನು
ಹೇಳಮ್ಮ ನನ್ನಮ್ಮ ಗೌರಮ್ಮ !

ಮಗುನಿನ್ನ
ಮನಮೆನಿತು ಮೃದು ನಿನ್ನ ನುಡಿಯೆನಿತು ಸಾತ್ವಿಕಂ ?
ಮರುಗುವರ ಕಂಡು ನೀನೇಕಿಂತು ಮರುಗುವೆಯೋ ?
ಚಿಣ್ಣ ನೀನೆಲ್ಲಿ ಈ ಧರ್ಮ ಬುದ್ಧಿಯಕಲಿತೆ ?
ಬಾಳು ನೀ ಬಹುಕಾಲ ! ನಿನಗೆ ಮಂಗಳಮಕ್ಕೆ !
ಹೇಳಮ್ಮ ಕತೆಯ ನೀನದನೆ ಮರೆಯಿಸುತಿರುವೆ !
ನನ್ನ ಕತೆಯೇನು ಸವಿ ? ಪಾಂಡವರ ಕೌರವರ
ಯುದ್ಧದಿತಿಹಾಸವೇ ? ರಾಮ ರಾವಣನನ್ನು
ಸಂಹರಿಸಿ ಸೀತೆಯನು ಕರೆತಂದು ಪಟ್ಟವನು
ಏರಿ ಮೆರೆದಿಹ ಕತೆಯೇ ? ನಳನಹುಷ ನರಪತಿಯ
ಕತೆಯೇನು ಹೇಳಲಿಕೆ ? ಶ್ರೀಕೃಷ್ಣಪರಮಾತ್ಮ
ಗೈದಲೀಲೆಯದಿದೆಯೇ ? ಏನಿಲ್ಲ ಎಂತಿಲ್ಲ
ಕತೆಯೆಲ್ಲಿ ಬಂತು ಮಗು ?

ಎನಿತು ಓದಿಹೆಯಮ್ಮ ?
ಭಾರತವ ಬಲ್ಲೆ ; ರಾಮಾಯಣವ ನರಿತಿರುವೆ
ಶ್ರೀಕೃಷ್ಣನವತಾರ ಕಂಡುಕೊಂಡಿಹೆ ನೀನು
ಸಾಹಿತ್ಯ ಸಂಸ್ಕೃತಿಯ ತೂಗಿ ನೋಡಿಹೆ ನೀನು
ಇತಿಹಾಸವೂ ಗೊತ್ತು ; ಎಲ್ಲಮ್ಮ ಇನಿತಲ್ಲ
ಓದಿಕೊಂಡುದು ಅಜ್ಜಿ ?

ಓದು ಬರೆ ಕಲಿತಿಲ್ಲ
ಶಾಲೆಯನು ಕಂಡಿಲ್ಲ; ನಿನ್ನಂಥ ತಿಳಿದವರು
ಹೇಳಿಹುದ ಕೇಳಿದೆನು: ನಾನು ತಿಳಿದುದೆ ನನಗೆ
ತಿಳಿಯದಂತಾಗಿಹುದು

ಬಲು ಮಾತುಗಾತಿ ನೀ
ಹೇಳಮ್ಮ ಹೇಳು ಕತೆ

ಹೇಳಲೇ ಬೇಕೇನು?
ಎಷ್ಟುಸಲ ಕೇಳುವುದು?

ಮುನಿಯದಿರು ಮುನಿಯದಿರು
ಕೋಪವಲ್ಲಹೆ ಪಾಪ? ಇಂಲಿ ಹೇಳುವೆ ಕೇಳು:
ಚೆನ್ನೂರು ನನ್ನೂರು: ಅದು ಹಳ್ಳಿ; ಬಲು ಕಿರಿದು
ಜನ ಸಂಖ್ಯೆ ಗೊತ್ತಿಲ್ಲ; ಮನೆಗಳನ್ನೆಣಿಸಿಲ್ಲ
ಚೆನ್ನೂರ ಪಡುವಣಕೆ ಮುಗಿಲನ್ನೆ ಮುದ್ದಿಡುವ
ಪರ್ವತಶ್ರೇಣಿಯಿದೆ; ಬೆಟ್ಟದಲಿ ಕಟ್ಟಡವಿ
ಬೆಳೆದು ನಿಂತಿದೆ ಸೊಕ್ಕಿ; ಗಿರಿವರನ ಚರಣದಲಿ
ಪರಮ ಪಾವನೆ ಪದ್ಮೆ ಪರಿದೋಡುತಿಹಳಲ್ಲಿ
ಜುಳು ಜುಳನೆ ಪರಿವ ತಿಳಿ ನೀರಿನಲಿ ಗಿಡಬಳ್ಳಿ
ಇಣುಕುವುವು ತಂತಮ್ಮ ನೆಳಲನೇ ನಿರುಕಿಸುತ
ಮೈಮರೆತು ನಲಿಯುವುವು. ಸಂಧ್ಯಾರುಣಜ್ಯೋತಿ
ಮೂಡಿಬರೆ ಮೂಡಲಲಿ ಚೆನ್ನೂರು ಹೊನ್ನಿನಲಿ
ತೇಲಿದಂತೆನಿಸುವುದು.

ಊರ ಮುಂಬದಿಗಿರುವ
ಹೆಗ್ಗೆರೆಯ ತಡಿಯಲ್ಲಿ ತೆಂಗಾಯ ಮರಗಳಿವೆ
ಎಲ್ಲೆಲ್ಲು ಸೌಂದರ್ಯ ಸೂಸುತಿದೆ ಕಣ್ಮನವ
ತಣಿಸುತಿದೆ; ಕವಿಯನ್ನು ಕೈಮಾಡಿ ಕರೆಯುತಿದೆ.

ನನ್ನೂರು ಚೆನ್ನೂರ ಗೌಡಿಕೆಯು ನನ್ನ ಮಗ
ಚೆನ್ನನಿಗೆ ಸೇರಿದುದು; ಚೆನ್ನನೆಂಥವಗೊತ್ತೇ ?
ಚಿನ್ನದಂತಹ ಬಣ್ಣ; ನೋಡಲಿಕೆ ಕಾಮಣ್ಣ !
ಚೆನ್ನ, ಚೆನ್ನಪ್ಪ, ಚೆನ್ನಿಗರಾಯ, ಚೆನ್ನಯ್ಯ
ಚಿನ್ನಬಾ, ರನ್ನಬಾ ಎನುತಿದ್ದೆ ದಿನದಿನವು
ಚೆನ್ನನಿಗೆ ಹದಿನಾರು ವರುಷಗಳು ತುಂಬುತಲೆ
ಹೊನ್ನಿಯನು ಕರೆತಂದು ಕಂಕಣವ ಕಟ್ಟಿಸಿದೆ
ಚಿನ್ನಕ್ಕೆ ರನ್ನವನು ಕುಂದಣಿಸಿದಂತಾಯ್ತು !
"ಎಂಥಜೊತೆ! ಬಲು ಸೊಗಸು ಗೌರೆವ್ವ ಗೌರವವ
ಪಡೆದೆ; ಚೆನ್ನನಿಗೆ ಚಿನ್ನವ ತಂದೆ ಪೂತಾಯಿ!"
ಎಂದು ಜನ ಹೊಗಳಿದುದು ಮನವಾರೆ, ಮದುವೆ ಬಲು
ಮುದದಿಂದ ಮುಗಿದಾಯ್ತು ; ಮುಂದೆ ತಿಂಗಳು ಕಳೆದು
ನಾಲ್ಕು ದಿನವಾಗಿತ್ತು ಹೊನ್ನವ್ವ ಚೆನ್ನೂರ
ಚೆನ್ನನಲಿ ಬೆರೆತಾಗ! ಅಮೃತವೇ ಬುವಿಗಿಳಿದು
ಬಂದಂತೆ ಚೆನ್ನನಾ ಸಂಸಾರ ಕಂಡಿತ್ತು
ಆದೊಡೇಂ? ಒಲ್ಲೆ ಮಗು ನಾನೊಲ್ಲೆ ಮುಂದಾದ
ಕತೆಯ ಪೇಳೆನು ಕ್ಷಮಿಸು! ತುಂಬಿಬರುತಿದೆ ದುಃಖ!

ಏನಮ್ಮ, ಏನಾಯ್ತು? ತಡೆ, ಗಾಸಿಗೊಳಬೇಡ
ಪೇಳು ಮುಂದೇನಾಯ್ತು !

ಇಪ್ಪತ್ತುವರುಷಗಳ
ಹಿಂದೊಮ್ಮೆ ಚೆನ್ನೂರು ಪ್ಲೇಗಿಗಾಹುತಿಯಾಯ್ತು !
ಆ ಹಾಳು ಬೇನೆಯಲಿ ಚೆನ್ನನೂ ಹೊನ್ನಿಯೂ
ತಿರುಗಿ ಬಾರದ ಶೂನ್ಯ ಬರಿ ಶೂನ್ಯ ದಾರಿಯಲಿ
ವೈಮರೆತು ಸಾಗಿದರು; ಅಯ್ಯೋ ಅಯ್ಯೋ ಸಾವು
ಎನಿತು ದಾರುಣ ಮಗುವೇ ! ಹೃದಯವೇ ಬೆಂದಾಯ್ತು !
ಭೀತಿ ಹೆಚ್ಚಿತು ಮನಕೆ; ಶಾಂತಿ ಹಾರಿತು ಎತ್ತೋ !

ಹಾಗು ಹೀಗೂ ಮಾಡಿ ನೂಕಿದೆನು ಬಾಳನ್ನು
ಸಾವು ಬಂದಡಸಿದರೆ ಸ್ವಾಗತವನೀಯುವೆನು
ಆದೊಡೆಲ್ಲವು ವ್ಯರ್ಥ; ಜಗದ ನೀತಿಯೆ ಬೇರೆ
**ಬಯಸದುದು ಸಿಕ್ಕುವುದು; ಬಯಸಿದುದು ಇಲ್ಲಿಲ್ಲ !**

*    *    *

ಮುದುಕಿ ಹೇಳಿದ ಕತೆಯು ಇಲ್ಲಿಗೇ ಮುಗಿದಾಯ್ತು.

ಬೆಂಗಳೂರು : ೧೯೪೧.

# ತಮ್ಮನಿಗೆ

ಶಬ್ದ ಸಾಗರವುಕ್ಕಿಬರುತಲಿದೆ, ಓ, ತಮ್ಮ,
ನಿನ್ನತುಲ ಕೀರ್ತಿಯನು ವರ್ಣಿಸಲು ಮುನ್ನುಗ್ಗಿ !
ಮುನ್ನಗೈದಾ ಸುಕೃತಕಿಂದು ಫಲ ದೊರಕಿದುದು
ಕನ್ನಡದ ನಾಡಗುಡಿ ತಲೆಯೆತ್ತಿ ಮೆರೆವಂತೆ
ಚೆನ್ನ, ನಿನ್ನಾತಪದ ಸಿದ್ಧಿ ಸಾಧಿಸುವಂತೆ
ವರ್ಣನಾತೀತ ಯಶ ಪಾದ ರೇಣುವಿನಂತೆ
ಪೂರ್ಣ ಪಾವನ ಪ್ರೇಮದಾವರಣವನು ಹೊತ್ತು
ಪುಣ್ಯ ಪುರುಷನ ದಿವ್ಯ ಭವ್ಯಾತ್ಮನುಸಿರಲ್ಲಿ
ಗಣ್ಯಗುರುವಿನ ಪಾದ ಪದ್ಮ ಸೌರಭದಲ್ಲಿ
ಮಿಂದು ಬಂದಿದೆ ಚಂದ ಚಂದಿರನ ಚೆಲುವಿನೊಲು !
ಕವಿಯ ಮನಕೂ ಮೀರಿ, ಭಾವ ಬುಗ್ಗೆಯು ತೂರಿ
ಭುವಿಯಿಂದ ಬ್ರಹ್ಮಾಂಡಕರೆನಿಮಿಷದಲಿ ಹಾರಿ
ಬಾಗಿಲಿಗೆ ಬಂತಿದೋ ಭಾಗ್ಯನಿಧಿ ನಿನಗಾಗಿ
ಯೋಗಮಿದು "**ಗುರುರಾಜ**" * ಕಾದಿತ್ತು ಬಲವಾಗಿ !

ಬೆಂಗಳೂರು : ೧೯೪೩.

* ೧೯೪೩ನೇ ಇಸವಿಯಲ್ಲಿ ಬೊಂಬಾಯಿ ವಿಶ್ವವಿದ್ಯಾಲಯದ ಮ್ಯಾಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತ ೨೭,೧೧೪ ಜನ ವಿದ್ಯಾರ್ಥಿಗಳಲ್ಲಿ ನನ್ನ ತಮ್ಮ ಚಿ|| ಗುರುರಾಜ ಮೊತ್ತಮೊದಲಿಗನಾಗಿ ತೇರ್ಗಡೆಯಾದ ಅಪೂರ್ವ ಯಶಸ್ಸಿನ ವಾರ್ತೆ ಕೇಳಿ ಬರೆದುದು.

# ಶ್ರೀಯುತರೆ ?

೧

ಅನ್ನ ದಾತನ ಮೇಲೆ ಕೈಯೆತ್ತ ಬಾರದೆಂ-
ದೆನ್ನುವಾ ತತ್ವದಲಿ ತಥ್ಯಾಂಶವಿದೆ; ಇರಲಿ !
ಅನ್ನ ದೊರಕಿಸ ಬಂದ ಮಾನವರು ಕುನ್ನಿಗಳೇ ?
ಪಶುಗಳೇ? ಕ್ರಿಮಿಗಳೇನು !
ಚೆನ್ನಾಗಿ-ಅರಿಯಿರೈ ಓ ! ಅನ್ನ ದಾತೃಗಳೇ !
ನಿನ್ನಿನಂತೆಯೆ ಇಂದು ಮುಂದು ಬಹ ದಿನಗಳಲಿ
ಬೆನ್ನು ಮೂಳೆಯು ಮುರಿವೆನೆಂಬ ಗರುವವನುಡಿಯ
ಗಂಟಲಲಿ ಹಿಡಿಯಿರಿನ್ನು !

೨

ಅಂದಿನಾದಿನಗಳಿಂದೆಲ್ಲೊ ಮರೆಯಾಗಿಹವು
ಇಂದು ಪ್ರತಿಮಾನವನ ಬದ್ಧಿ ಬಲವಾಗಿಹುದು
ಎಂದಿಗಾದರೂ ಅನ್ನ ಧನಕನಕ ಸಂಪತ್ತು
ಬಾಗಲಿಗೆ ಬಂದು ಕುಳಿತು
ಇಂದಿದೋ ಬಂದಿಹೆನು ತೆರೆಯಿರೈ ಬಾಕಿಲವ
ಎಂದೆಂಬ ಹೊತ್ತೊಮ್ಮೆ ಈ ಕಾಲ ಗರ್ಭದಲಿ
ಬಂದೆ ಬರುವುದು ದಿಟಂ ಅಂದಿಗಾವುದು ಗತಿಯು !
ನಿಮಗೆಲ್ಲೈ ಶ್ರೀಯುತರೆ ?

**ಬೆಂಗಳೂರು :** ೧೯೪೧.

# ಮಾನವನು ಬಿಟ್ಟಾಗ

೧

ಮಾನವನು ಬಿಟ್ಟಾಗ ಬಾಳು ಬಲು ಹಗುರಂತೆ
ಇಲ್ಲದಿರೆ, ಹೆಣದಂತೆ ಭಾರವಂತೆ !
ಜ್ಞಾನಿ ಹೇಳುವುದೇಕೆ ? ಇದು ದಿನದ ಮಾಚಿಂತೆ
ಅಲ್ಲವೆನ್ನುವ ಮಾತು ಕೊಳೆತ ಕಂತೆ.

ಬೆಂಗಳೂರು : ೧೯೪೬.

# ಮಿಲನ

೧

ದೀವಳಿಗೆಯೊಳು ಕಾಂಬ
ಸಾಲು ದೀಪದ ತೆರದಿ
‘ ಭಾವ ’ ದೀಪಗಳೆಲ್ಲ-
ಒಂದಾಗಲಿಹವೆಂದೋ ?

೨

‘ ಒಂದ ’ ರೊಳು ನೂರಾಗಿ
ನೂರರೊಳಗೆನಿತೆನಿತೊ
ವಿರಸ ಭಾವಗಳುದಿಸಿ
ಹೃದಯವನು ಕೊರೆಯುತಿವೆ

೩

ಹಿಂದಿನಂತೆಯೆ ಬುದ್ಧ-
ಬಸವೇಶ್ವರರು ಜನಿಸಿ
ಒಂದರೊಳು ನೂರನ್ನು
ಮಿಲನ ಮಾಡುವರೇನೊ ?

೪

ಬಂದಿಹುದು ಕಲಿಕಾಲ
ಬರಲಿಹುದು ‘ ಆಕಾಲ ’
ಇನ್ನಾವ ಕಾಲದಲಿ
‘ ದೇವ ’ ಜನಿಸುವ ನಿಹನೊ ?

೫

‘ ದೇವ ’ ಜನಿಸಲು ಸರಿಯೆ
ಜನಿಸ ದಿರ್ದರು ಸರಿಯೆ
ಒಂದರೊಳು ‘ ನೂರು ’ ಗಳು
ಮಿಲನವಾಗಲೆ ಬೇಕು

ಹಾವೇರಿ : ೧೯೩೬

# ವಿಶ್ವಕರ್ಣಾಟಕವೆ

ವಿಶ್ವದುಸಿರೆಲೆ ನೀನು ವಿಶ್ವಕರ್ಣಾಟಕವೆ
ವಿಶ್ವಾತ್ಮ ನಣುರೇಣು ಪರಿಪೂರ್ಣ ಶ್ರೀಕೃಷ್ಣ
ಸವ್ಯಸಾಚಿಗೆ ದಿವ್ಯ ಭವ್ಯೋಪದೇಶವನು
ಬಹುಭಯಂಕರ ರಣದ ಮಧ್ಯದಲಿ ಗೈಯ್ಯುತ್ತೆ
ಸ್ಫೂರ್ತಿ ಶಕ್ತಿಯಕೊಟ್ಟು ಕೌರವರ ಶಿರ ತರಿದ
ಈ ಮಹಾ ದೇವಾಧಿ ದೇವನೇ ನಿಂತಿಹನು
ನಿನ್ನ ಬೆಂಬಲಕಿಂದು ! ಇದಿರಾರು ದೇವನಿಗೆ ?
ಮನಜಶಕ್ತಿಯು ಮಣ್ಣು ಮುಕ್ಕಲಾಶ್ಚರ್ಯವೋ ?
ಕ್ರೌರ್ಯದ್ವೇಷಾಸೂಯೆ ಬದುಕಲಾಪವೆ ಹೃದಯ
ಪರಿಶುದ್ಧರಂ ತಪಿಸಿ ? ಶಿಖಿಯೊಡನೆ ಸರಸವೋಂ ?
ಸಿದ್ಧಾರ್ಥ ಬುದ್ಧನಪ್ಪನ್ನೆವರ ಜನರಿಂದ
ಮರೆಯಾದ ; ಶಾಶ್ವತವೆ ಆಕಾಲ ಬುವಿಯಲ್ಲಿ ?!
ಸಿದ್ಧಿಗಾಗಿಯೆ ಬದ್ಧಯೋಗಿಯಾಗೆಲೊ ನೀನು
ಇದ್ದು ಸತ್ತವನಂತೆ ಬದುಕಿ ಸಾರ್ಥಕವೇನು ?

ಬೆಂಗಳೂರು : ೧೯೪೩

# ಬಾಳು ಹಾಳು ಧರ್ಮಶಾಲೆ

೧

ಬಾಳು ಹಾಳು ಧರ್ಮಶಾಲೆ
ಹಗಲು ರಾತ್ರಿ ಬಾಗಿಲ ;
ಅರಸರೆನಿತೊ ಗೈದು ಲೀಲೆ
ಉಳಿದು ಹೋದರೀ ನೆಲ !

೨

ದಿನಕೆ ಸಾವಿರಾರು ಹೂವು
ಅರಳಿ ಉರುಳಿ ಅಳಿವವು ;
ನಿಮಿಷಕೊಂದು ಕೋಟಿ ಜೀವ
ಸತ್ತು ಹುಟ್ಟಿ ಬೆಳೆವವು

೩

ಅಲ್ಲಿ ಪೊಡವಿಗೆಲ್ಲನನ್ನು
ಹುಗಿದು ಗೋರಿಗೈದರು ;
ಬಲ್ಲ ಜನರೆ ಶೂರನೆದೆಯ
ತುಳಿದು ತುಳಿದು ನಡೆವರು

ಹಾವೇರಿ : ೧೯೩೫

# ಅಂದು-ಇಂದು

೧

ಅಂದು ಮುಗಿಲ ನೋಡಿದೆ
ಬೆಳಕೇ ಕಾಣದಾಯಿತು !
ಇಂದು ಮುಗಿಲ ನೋಡಿದೆ
ಬೆಳಕೇ ಬೆಳಕು ಕಂಡಿತು !

೨

ಭಾವತುಂಬಿ ಬಂದಿತು
ಜೀವಕಳೆಯ ತುಂಬಿತು !
ಸಾವನೋವ ಮರೆಸಿತು
' ಬಾಳು-ಗೆಲ್ಲು ! ' ಎಂದಿತು.

ಹಾವೇರಿ : ೧೯೪೦

# ಪ್ರಾರ್ಥನೆ

೧

ಶೃಂಗಾರದ ಸರಸಿರುಹವೆ
ಭೃಂಗದ ಬಾಯ್ದನಿಯೊಳಿರುವೆ
ಬಂಗಾರದ ಬನದ ಚೆಲುವೆ
ನಕ್ಕು ನಲಿದು ಬಾ !

೨

ನೋಡದ ಸೆಳೆಮಿಂಚಿನಂತೆ
ಹಾಡಿನ ರಸದೂಟೆಯಂತೆ
ಕಾಡಿನ ಬೆಳದಿಂಗಳಂತೆ
ಚಿಮ್ಮಿ ಹೊಮ್ಮಿ ಬಾ !

೩

ಒಲವಿನ ಉಯ್ಯಾಲೆಯಲ್ಲಿ
ನಲುಮೆಯ ನವರಾಗದಲ್ಲಿ
ಉಲಿದೊಲಿಯುವ ಮೋಡಿಯಲ್ಲಿ
ತೂಗಿ ತೂಗಿ ಬಾ !

೪

ಜಗದನುಭವ ತೇಲುವಲ್ಲಿ
ಮುಗಿಲಗಲದ ಭಾವದಲ್ಲಿ
ಸೊಗಸಿನಲರಕಂಪಿನಲ್ಲಿ
ಮೈದುಂಬುತೆ ಬಾ !

೫

ಸೂರ್ಯ ಚಂದ್ರರೀಜುವಲ್ಲಿ
ತೂರ್ಯ ಸ್ವನ ತುಂಬುವಲ್ಲಿ
ಆರ್ಯರ ಘನಮಂತ್ರದಲ್ಲಿ
ತೇಲಿ ತೇಲಿ ಬಾ !

೬

ನಗೆ ಮುಗುಳಿನ ರೂಪದಲ್ಲಿ
ಸೊಗದ ಸುಸಿಲು ಸೂಸುವಲ್ಲಿ
ಬಗೆಯ ಭಾಗ್ಯ ತೆರೆಯುವಲ್ಲಿ
ನಿಂತು ನಿಂತು ಬಾ !

೭

ಪರಿಪೂರ್ಣನ ಪ್ರಾಣದುಸಿರೆ
ಸಿರಿಯೊರತೆಯ ಮಧುರ ನೀರೆ
ಅಮರತ್ವದ ಅರಿವೆ ಬಾ
ಸುಮನೋಹರ ಸುಮವೆ ಬಾ
ನನ್ನಿರವೇ ಬಾ
ನಿನ್ನ ಬೆರೆವೆ ಬಾ !

ಬೆಂಗಳೂರು : ೧೯೪೫

# ಮೊದಲ ಚರಣಗಳು

---